# ದೇವರ ಗುರುತು–963

(ಭಗವದ್ಗೀತೆ ಅ.15–ಶ್ಲೋ॥ 16, 17)

# ಮಾಯೆ ಗುರುತು–666

(ಭಗವದ್ಗೀತೆ ಅ.16–ಶ್ಲೋ॥ 14)




ರಚಿತ : ತ್ರಿಮತ ಐಕ್ಯೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



www.thraithashakam.org



# ಸೃಷ್ಟಿಕರ್ತ ಕೋಡ್–963

(ಭಗವದ್ಗೀತೆ ಅ.15–ಶ್ಲೋ॥ 16, 17)

# ಮಾಯೆ (ಸಾತಾನ್) ಕೋಡ್–666

(ಭಗವದ್ಗೀತೆ ಅ.16–ಶ್ಲೋ॥ 14)


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

## ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಆಗಸ್ಟ್ –2016

ಪ್ರತಿಗಳು : 1000 **ಬೆಲೆ. 70/–**

## "ಇಂದೂ ಜ್ಞಾನವೇದಿಕೆ" ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ x ವಿಗ್ರಹ – ದೈವ x ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!



80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)

04
# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ -
ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ-
ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ-ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ - ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು-
ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು-
ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು-ಆನಂದಮು.
81. ದಶ-ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು-
ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
ಮಹೇಂದ್ರಜಾಲ,
ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
(ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು-
ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು-
ಆರು-ತೊಮ್ಮಿದಿ
89. 6-3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ-ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು-ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ-ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು - ಬೋಧ.
110. ಆಟ - ದೋಬೂಚುಲಾಟ.
111. ಪ್ರಜಲು - ಮಾನವುಲು.
112. ಆಸ್ತಿ - ದೋಸ್ತಿ
113. ದಂತಮು-ಅಂತಮು.
114. ಮಾಯ ಮರ್ಮಮು-ಆತ್ಮ ಧರ್ಮಮು
115. ಶ್ರೀಕೃಷ್ಣುಡು
ಚನಿಪೋಯಾಡಾ? ಚಂಪಬಡ್ಡಾಡಾ?
116. ಆಧ್ಯಾತ್ಮಿಕ ಪ್ರಶ್ನಲು-ಜವಾಬುಲು.

# ‘ಇಂದೂ ಜ್ಞಾನವೇದಿಕೆ’ ಗ್ರಂಥಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : **ಶ್ರೀನಿವಾಸ**–09705864675, **ಲಕ್ಷ್ಮೀನಾರಾಯಣಾಚಾರಿ**–09440556968.
**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

### ಎ. ರಾಘವೇಂದ್ರ ಶ್ರೇಷ್ಠಿ

ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

### ಜಿ. ರಾಧಾಕೃಷ್ಣಾ ರೆಡ್ಡಿ

ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

### ಶಿವರಾಜ

(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

### R.S. ವೀರಾಚಾರಿ

ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560085
Cell : 9036982829

### G. ಮನೋಹರ್

ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

### B. ವಾತ್ಸಲ್ಯ

ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

### ಬಸವರಾಜ ಅಂಗಡಿ

(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

### ಸೂರ್ಯ ಪ್ರಕಾಶ

ಟೈಪ್ ‘ಸಿ’ (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

### ಲೀಲಾವತಿ

ಮಾರುತಿ ಟೆಂಟ್ ರೋಡ್, ಚಾಮರಾಜ
ಮೊಹಲ್ಲ, ಮೈಸೂರ್–547097
Cell : 9986369118

### T.V. ರಮಣ

ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560068
Cell : 08970772028, 07411459912, 07406039453

### M. ನಾರಾಯಣರೆಡ್ಡಿ

(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್,
ವೈಟ್ ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ! ಓದಿಸಿರಿ!!

# ದೇವಾಲಯ ರಹಸ್ಯಗಳು

ಪ್ರಪಂಚ ಪಟದಲ್ಲಿ ಭಾರತದೇಶ ಆಧ್ಯಾತ್ಮಿಕಕ್ಕೆ ಹುಟ್ಟಿದ ಮನೆಯಂತೆ ಹೇಳಿದ್ದರೂ ದಕ್ಷಿಣ ಭಾರತದೇಶ ಸ್ವಚ್ಛವಾದ ದೈವ ಜ್ಞಾನಕ್ಕೆ ಬೆನ್ನೆಲುಬಿನಂತಹದು. ದಕ್ಷಿಣ ಭಾರತದೇಶದಲ್ಲಿ ನಿರ್ಮಿಸಲಾಗಿರುವ ದೇವಾಲಯಗಳು, ಸೃಷ್ಠಿ ಆದಿಯಲ್ಲಿ ದೇವರ ಜ್ಞಾನಕ್ಕೆ ಸಂಕೇತಗಳಾಗಿ ಮತ್ತು ಸಂದೇಶಗಳಾಗಿ ಪ್ರಕಾಶಿಸುತ್ತಿವೆ. ದೇವಾಲಯಗಳಲ್ಲಿನ ವಿಧಿವಿಧಾನಗಳಿಗೆ ಸರಿಯಾದ ಅರ್ಥ ತಿಳಿಯದ ದುರದೃಷ್ಟಕರ ಪರಿಸ್ಥಿತಿಯಲ್ಲಿ ಈದಿನ ನಾವಿದ್ದೇವೆ. ನಮ್ಮ ನಂತರ ಪೀಳಿಗೆಯವರು ಕೇಳುವ ಪ್ರಶ್ನೆಗಳಿಗೆ ಉತ್ತರ ಹೇಳಲಾರದ ಸ್ಥಿತಿಯಲ್ಲಿ ದೇವಾಲಯಗಳ ನಿರ್ಮಾಣವನ್ನು ಕೈಯ್ಯಾರಾ ನಾವೇ ಪ್ರಶ್ನಾರ್ಥಕ ಮಾಡಿಕೊಳ್ಳುತ್ತಿದ್ದೇವೆ. ಆಧ್ಯಾತ್ಮಿಕ ರಹಸ್ಯಗಳನ್ನು ದೇವಾಲಯಗಳಲ್ಲಿ ಹೆಜ್ಜೆ ಹೆಜ್ಜೆಗೂ ಆದಿನದ ಜ್ಞಾನಿಗಳು ನಿಕ್ಷಿಪ್ತ ಮಾಡಿರುವಾಗ, ಅವುಗಳನ್ನು ಅನ್ವೇಷಿಸುವವರಿಗೆ ಆ ರಹಸ್ಯಗಳು ತಿಳಿಯದಂತಾಗಿರುವ ಸಮಯದಲ್ಲಿ ಮರುಭೂಮಿಯಲ್ಲಿ ಒಯಾಸಿಸ್ಸಿನ ಹಾಗೆ ಲಭಿಸುವ ಅಪರೂಪವಾದ ಆಧ್ಯಾತ್ಮಿಕ ಗ್ರಂಥವೇ **"ದೇವಾಲಯ ರಹಸ್ಯಗಳು."**

ಈ ಗ್ರಂಥದಲ್ಲಿ ದೇವಾಲಯ ಗೋಪುರದಿಂದ ಹಿಡಿದು ಗರ್ಭಗುಡಿಯಲ್ಲಿ ಸಾಕಾರ ಪ್ರತಿಮೆವರೆಗೂ, ಮತ್ತೂ ಆ ಪ್ರತಿಮೆಗೆ ಮಾಡುವ ಪೂಜಾ ವಿಧಾನದಲ್ಲಿನ ಪ್ರತಿಯೊಂದು ಕಾರ್ಯಕ್ಕೂ ಸುಲಭ ಶೈಲಿಯಲ್ಲಿ, ಶಾಸ್ತ್ರಬದ್ಧವಾದ ವಿವರ ಕೊಡಲಾಗಿದೆ. ಇಲ್ಲಿಯವರೆಗೂ ಯಾರೂ ಬಿಚ್ಚಿ ಹೇಳಲಾರದ ಆಧ್ಯಾತ್ಮಿಕ ರಹಸ್ಯಗಳ ಗುಟ್ಟನ್ನು ಮೊಟ್ಟಮೊದಲ ಬಾರಿ ಪ್ರಬೋಧಾನಂದ ಯೋಗೀಶ್ವರರು ಪ್ರಪಂಚಕ್ಕೆ ತಿಳಿಯುವಂತೆ ಮಾಡಿದ್ದಾರೆ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸೃಷ್ಟಿಕರ್ತ ಕೋಡ್–963

(ಭಗವದ್ಗೀತೆ ಅ.15–ಶ್ಲೋ॥ 16, 17)

# ಮಾಯೆ (ಸಾತಾನ್) ಕೋಡ್–666

(ಭಗವದ್ಗೀತೆ ಅ.16–ಶ್ಲೋ॥ 14)

ಈಗ ಕಾಣಿಸುವ ಈ ವಿಶ್ವವೆಲ್ಲವೂ ಒಂದು ಕಾಲದಲ್ಲಿ ಇಲ್ಲ. ಈ ವಿಶ್ವವೆಲ್ಲವು ಇಲ್ಲದಿರುವಾಗಲೂ ಸಹ ಒಂದು ಉಳಿದಿದೆ, ಅದೇ ದೇವರು. ಮೇಲೆ ಆಕಾಶವಾಗಲೀ, ಕೆಳಗೆ ಭೂಮಿಯಾಗಲೀ, ಮಧ್ಯದಲ್ಲಿ ಗಾಳಿಯಾಗಲಿ, ಅಗ್ನಿಯಾಗಲಿ, ನೀರಾಗಲಿ, ಯಾವ ಜೀವರಾಶಿಯಾಗಲಿ ಇಲ್ಲದಂತಹ ಸಮಯದಲ್ಲಿ ದೇವರು ಪಂಚ ಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಇರುವ ಪ್ರಪಂಚವನ್ನೂ, ಸಕಲ ಜೀವರಾಶಿಗಳಿರುವ ಜಗತಿಯನ್ನು ತಯಾರು ಮಾಡಬೇಕೆಂದುಕೊಂಡಿದ್ದಾನೆ. ಪ್ರಪಂಚ+ಜಗತಿ=ವಿಶ್ವ. ಜೀವರಾಶಿ ಗಳಿಲ್ಲದ ಪ್ರಪಂಚವನ್ನೂ, ಜೀವರಾಶಿಗಳಿರುವ ಜಗತಿಯನ್ನು ಎರಡನ್ನೂ ಸೇರಿಸಿ ಹೇಳುವ ಪದವನ್ನು ವಿಶ್ವ ಎನ್ನುತ್ತೇವೆ. ವಿಶ್ವವಿಲ್ಲದ ಸಮಯದಲ್ಲಿರುವ ದೇವರು ಪುರುಷನೂ ಅಲ್ಲ, ಸ್ತ್ರೀಯು ಅಲ್ಲ, ನಪುಂಸಕನು ಅಷ್ಟಕ್ಕೂ ಅಲ್ಲ. ರೂಪವಾಗಲಿ, ಹೆಸರಾಗಲಿ ಇಲ್ಲದವನು ದೇವರು. ದೇವರು ಎಂತಹ ಲಿಂಗಭೇದವೂ ಇಲ್ಲದವನು. ಅಂತಹ ದೇವರಿಂದ ವಿಶ್ವವನ್ನು ಸೃಷ್ಟಿಸಬೇಕೆನ್ನುವ ಸಂಕಲ್ಪ ಬಂದಾಗ ಮೊದಲು ತನ್ನಿಂದ ಎರಡು ಭಾಗಗಳನ್ನು ತಯಾರು ಮಾಡಿದ್ದಾನೆ. ಆ ಎರಡು ಭಾಗಗಳನ್ನೂ ಸಹ ಎರಡು ಬಾರಿ ಸೃಷ್ಟಿಸಿದ್ದಾನೆ. ದೇವರು ತಯಾರುಮಾಡಿದ ಎರಡು ಭಾಗಗಳನ್ನು ಒಂದುಬಾರಿ ತಯಾರು ಮಾಡದೆ, ಎರಡು ಬಾರಿ ಏಕೆ ತಯಾರು ಮಾಡಿದ್ದಾನೆಂದರೆ? ಎರಡು ಭಾಗಗಳಲ್ಲಿ ಒಂದು ಸ್ತ್ರೀತತ್ತ್ವವಾದರೆ, ಎರಡನೆಯದು ಪುರುಷಸಂಬಂಧವಾದದ್ದು. ಮೊದಲು ಸ್ತ್ರೀತತ್ತ್ವವಾದ ಪ್ರಕೃತಿಯನ್ನು ತನ್ನಿಂದ ದೇವರು ತಯಾರು ಮಾಡಿದ್ದಾನೆ. ಎಂದಾದರೆ ಸ್ತ್ರೀತತ್ತ್ವವಾದ ಪ್ರಕೃತಿಯನ್ನು ತಯಾರಿಸಿದ್ದಾನೋ ಅದಕ್ಕೆ ಅಧಿಕಾರವನ್ನು ವಹಿಸುವುದಕ್ಕೆ ತಾನು ಪುರುಷನಾಗಿದ್ದಾನೆ. ಪ್ರಕೃತಿ ತಯಾರಾಗದ ಮೊದಲು ಸ್ತ್ರೀ, ಪುರುಷನು ಅಲ್ಲದ ದೇವರು ಪ್ರಕೃತಿ ತಯಾರಾದ ನಂತರ ಪ್ರಕೃತಿ ಸ್ತ್ರೀ ಸ್ವಭಾವವನ್ನು ಹೊಂದಿರುವಾಗ, ದೇವರು ಪುರುಷ ಸ್ವಭಾವವನ್ನು ಹೊಂದಿರುವವನಾಗಿದ್ದಾನೆ. ಪ್ರಕೃತಿಯನ್ನು ಭರಿಸುವವನು ದೇವರು, ಆದ್ದರಿಂದ

ಆತನನ್ನು ಪ್ರಕೃತಿಗೆ ಭರ್ತ (ಪತಿ) ಎಂದು ಹೇಳುವುದು ನಡೆದಿದೆ. ದೇವರು ಪತಿ ಆದಾಗ ದೇವರಿಂದ ಭರಿಸಲ್ಪಡುವ ಪ್ರಕೃತಿ ಪತ್ನಿ ಆಗಿದೆ. ಇದರ ಪ್ರಕಾರ ದೇವರೂ ಪ್ರಕೃತಿ ಇಬ್ಬರೂ ಪತಿಸತಿಗಳಾಗಿ ಇದ್ದಾರೆಂದು ತಿಳಿಯುತ್ತಿದೆ.

ದೇವರು ಮೊದಲು ಸ್ತ್ರೀತತ್ತ್ವವಾದ ಪ್ರಕೃತಿಯನ್ನು ತಯಾರಿಸಿ, ನಂತರ ಎರಡನೆಯಬಾರಿ ಪುರುಷತತ್ತ್ವವಾದ ಆತ್ಮವನ್ನು ತಯಾರಿಸಿದ್ದಾನೆ. ಆತ್ಮ ತಯಾರಾದ ನಂತರ ಆತ್ಮಗಿಂತಲೂ ಬೇರೆಯಾದವನು ದೇವರು ಆದ್ದರಿಂದ ದೇವರಿಗೆ ಪರಮಾತ್ಮ ಎಂದು ಗುರುತು ಬಂದಿದೆ. ದೇವರು ಮೊದಲು ಸ್ತ್ರೀ ಭಾವವಿರುವ ಪ್ರಕೃತಿಯನ್ನು ಸೃಷ್ಠಿಸಿ ನಂತರ ಪುರುಷ ಭಾವವಿರುವ ಆತ್ಮವನ್ನು ಸೃಷ್ಠಿಸಿದ್ದಾನೆಂದುಕೊಂಡಿದ್ದೇವಲ್ಲ! ಸ್ತ್ರೀ ಪುರುಷಸಂಬಂಧವಾದ ಪ್ರಕೃತಿ, ಆತ್ಮಗಳನ್ನೇ ಅಲ್ಲದೆ ಎರಡಕ್ಕೂ ತಪ್ಪಿದ ನಪುಂಸಕನನ್ನು ತಯಾರು ಮಾಡಬೇಕೆಂದುಕೊಂಡಿದ್ದಾನೆ. ತಕ್ಷಣ ಜೀವಾತ್ಮನನ್ನು ಆತ್ಮನಿಂದ ಹೊರಬೀಳುವಂತೆ ಮಾಡಿದ್ದಾನೆ. ಇತ್ತ ಪ್ರಕೃತಿಯನ್ನೂ, ಅತ್ತ ಆತ್ಮನನ್ನು ತಯಾರುಮಾಡಿದ ದೇವರು ಮಧ್ಯೆದಲ್ಲಿ ಜೀವಾತ್ಮನನ್ನು ಸಹಾ ಮಾಡಲಾಗಿದೆ. ವಿವರವಾಗಿ ಹೇಳಿಕೊಳ್ಳಬೇಕೆಂದರೆ ಅತ್ತ ಸ್ತ್ರೀಯನ್ನು, ಇತ್ತ ಪುರುಷನನ್ನು ತಯಾರಿಸಿದ ದೇವರು ಮಧ್ಯದಲ್ಲಿ ನಪುಂಸಕನನ್ನು ತಯಾರು ಮಾಡಿದ್ದಾನೆಂದು ಕೊಳ್ಳಬೇಕು. ಆತ್ಮನಿಂದ ಮತ್ತೊಂದು ಜೀವಾತ್ಮನನ್ನು ಸೃಷ್ಠಿಸಿದಾಗ ಪ್ರಕೃತಿಯನ್ನೂ ಸಹ ಐದು ಭಾಗಗಳಾಗುವಹಾಗೆ ಮಾಡಿದ್ದಾನೆ. ಆ ಐದು ಭಾಗಗಳು 1) ಆಕಾಶ 2) ಗಾಳಿ 3) ಅಗ್ನಿ 4) ನೀರು 5) ಭೂಮಿ ಎಂದು ತಿಳಿಯುತ್ತಿದೆ. ಇದನ್ನು ಪ್ರಕೃತಿ ಸಂಬಂಧ ಪಂಚಭೂತಗಳನ್ನು ಪ್ರಪಂಚ ಎನ್ನುತ್ತಿದ್ದೇವೆ. ಈ ಪ್ರಪಂಚದಲ್ಲಿ ಆತ್ಮ ಜೀವಾತ್ಮಗಳು ಎರಡನ್ನೂ ಜಗತಿಯಾಗಿ ದೇವರು ತಯಾರು ಮಾಡಿದ್ದಾನೆ. ಪ್ರಕೃತಿಯನ್ನು ಭರಿಸುವವನು ಪರಮಾತ್ಮ (ದೇವರು) ಆದಾಗ, ಜೀವಾತ್ಮನನ್ನು ಭರಿಸುವವನು ಆತ್ಮ. ಪಂಚಭೂತಗಳಿಂದ ಮನುಷ್ಯ ಶರೀರ ತಯಾರಾದಾಗ ಆತ್ಮ ಜೀವಾತ್ಮಗಳು ಆ ಶರೀರದಲ್ಲಿ ನಿವಾಸಿಸುತ್ತಿವೆ. ಇದೇ ವಿಧಾನ ಎಲ್ಲಾ ಜೀವರಾಶಿಗಳಿಗೂ ಅನ್ವಯಿಸುತ್ತಿದೆ.

ಪುರುಷನಾಗಿ ಪರಮಾತ್ಮ, ಸ್ತ್ರೀಯಾಗಿ ಪ್ರಕೃತಿ ಇದೆಯೆಂದು ಕೊಂಡಿದ್ದೇವಲ್ಲವೆ! ಪ್ರಕೃತಿ ಶರೀರದಲ್ಲಿ ನಿವಾಸಿಸುವ ಅರ್ಧ ಪುರುಷ ಅರ್ಧ ಸ್ತ್ರೀಯಾದ ಜೀವಾತ್ಮ ಆಕಡೆ ಪ್ರಕೃತಿ ಕಡೆ ಹೋಗುತ್ತದಾ ಈಕಡೆ ಪರಮಾತ್ಮನ ಕಡೆ ಹೋಗುತ್ತದಾ ಎನ್ನುವುದೇ ಇಲ್ಲಿ ಮುಖ್ಯವಾದ ಕೆಲಸ. ಜೀವಾತ್ಮ ಪೂರ್ತಿ ಹೆಣ್ಣು ಗಂಡು ಅಲ್ಲದ ಮಧ್ಯೆ ತರಹದವನು ಆದ್ದರಿಂದ ಪೂರ್ತಿ ತನ್ನಕಡೆ ಎಳೆದುಕೊಳ್ಳುವುದಕ್ಕೆ ಪ್ರಕೃತಿ ಪ್ರಯತ್ನಿಸುತ್ತಿರುತ್ತದೆ. ಹಾಗೇ ಪೂರ್ತಿ ತನ್ನ ಕಡೆ ಎಳೆದುಕೊಳ್ಳುವುದಕ್ಕೆ ಆತ್ಮ ಸಹ ಪ್ರಯತ್ನಿಸುತ್ತಿರುತ್ತದೆ. ಜೀವಾತ್ಮನನ್ನು ತನ್ನ ಕಡೆ ಎಳೆದುಕೊಳ್ಳುವುದಕ್ಕೆ ಪ್ರಕೃತಿಗೆ ಗುಣಗಳೆನ್ನುವ ಆಕರ್ಷಣೆ ಇದೆ. ಗುಣಗಳನ್ನೇ ಮಾಯೆ ಎನ್ನುತ್ತಿದ್ದೇವೆ. ಹಾಗೆ ಜೀವಾತ್ಮನನ್ನು ಆತ್ಮ ತನ್ನ ಕಡೆ ಎಳೆದುಕೊಳ್ಳುವುದಕ್ಕೆ ಆತ್ಮಕ್ಕೆ ಆತ್ಮಜ್ಞಾನ ಎನ್ನುವ ಆಕರ್ಷಣೆ ಇದೆ. ಅತ್ತ ಮಾಯೆಗೂ, ಇತ್ತ ಆತ್ಮಜ್ಞಾನಕ್ಕೂ ಮಧ್ಯೆ ಇರುವ ಜೀವಾತ್ಮ ತಾನು ಯಾವ ಕಡೆ ಹೋಗುವುದು ತನ್ನ ಇಷ್ಟದ ಮೇಲೆ ಆಧಾರವಾಗಿರುತ್ತದೆ. ಜೀವಾತ್ಮ ಇತ್ತ ಮಾಯೆ ಕಡೆಗೆ ಹೋಗುತ್ತಾನಾ! ಅತ್ತ ಆತ್ಮ ಕಡೆಗೆ ಹೋಗುತ್ತಾನಾ! ಎಂದು ವಿನೋದವನ್ನು ದೇವರು ನೋಡುತ್ತಿದ್ದಾನೆ. ಮಾಯೆ ಕಡೆ ಹೋದವನು ಪ್ರಕೃತಿಯೊಳಗೆ, ಆತ್ಮ ಜ್ಞಾನದಕಡೆ ಹೋದವನು ಪರಮಾತ್ಮನೊಳಗೆ ಸೇರುತ್ತಾನೆ. ಮಾಯೆ ಕಡೆ ಹೋಗುವವನನ್ನು ಮಾಯೆಗೆ(ಪ್ರಕೃತಿಗೆ) ಗುರುತಾಗಿ ಆರುನೂರಾ ಅರವತ್ತಾರು (666) ಎನ್ನುವ ಸಂಖ್ಯೆಯನ್ನು, ಆತ್ಮನಕಡೆ ಹೋಗುವವನನ್ನು ಜ್ಞಾನಕ್ಕೆ (ದೇವರಿಗೆ) ಗುರುತಾಗಿ 963 ಎನ್ನುವ ಸಂಖ್ಯೆಯನ್ನು ಗುರುತಿಸಿಕೊಂಡಿದ್ದೇವೆ. ದೇವರ ಗುರುತಾಗಿ 963 ಸಂಖ್ಯೆಯನ್ನು ಏಕೆ ಇಟ್ಟುಕೊಂಡಿರುವುದು, ಹಾಗೆ ಮಾಯೆಗೆ ಗುರುತಾಗಿ 666 ಸಂಖ್ಯೆಯನ್ನು ಏಕೆ ಇಟ್ಟುಕೊಂಡಿರುವುದು ತಿಳಿಸುವುದೇ ಈ ಚಿಕ್ಕ ಪುಸ್ತಕ.

ಸರ್ವಜೀವರಾಶಿಗಳಿಗೂ ತಾಯಿ ಪ್ರಕೃತಿಯಾಗಿ, ತಂದೆ ಪರಮಾತ್ಮನಾಗಿ ಇದ್ದಾನೆಂದು ಭಗವದ್ಗೀತೆಯಲ್ಲಿಯೂ ಸಹ ಹೇಳಲಾಗಿದೆ. ತಂದೆ ಭೀಜದಾತನಾದಾಗ, ತಾಯಿ ಶರೀರಧಾತ ಆಗುತ್ತಿದೆ. ಒಬ್ಬ ಮನುಷ್ಯನಿಗೆ ತಾಯಿ

ತಂದೆ ಇಬ್ಬರೂ ಸಮಾನವೇ, ಆದ್ದರಿಂದ ಪ್ರಕೃತಿಗೆ ಸೂಚಿಸಿದ 666 ಆಗಲಿ, ಪರಮಾತ್ಮನಿಗೆ ಸೂಚಿಸಿದ 963 ಆಗಲೀ ಕೂಡಿದರೆ ಎರಡೂ ಸಮಾನವಾದ 18 ಸಂಖ್ಯೆಯೇ ಬರುತ್ತಿದೆ. ಇಲ್ಲಿಯವರೆಗು ಪ್ರಕೃತಿಯನ್ನು ಕುರಿತು, ಪರಮಾತ್ಮನನ್ನು ಕುರಿತು, ಜೀವಾತ್ಮ ಆತ್ಮ ಮಾಯೆಯನ್ನು ಕುರಿತು ಸ್ವಲ್ಪ ತಿಳಿದುಕೊಂಡಿದ್ದೇವೆ. ದೇವರಿಗೆ ಸಂಬಂಧಿಸಿದ ಸಂಖ್ಯೆ 963 ಎಂದು ಏಕೆಇದೆ? ಎನ್ನುವ ವಿಷಯ ವನ್ನೂ, ಹಾಗೇ ಮಾಯೆ ಸಂಬಂಧ ಸಂಖ್ಯೆ 666 ಎಂದು ಏಕೆ ಇದೆಯೆನ್ನುವ ವಿಷಯವನ್ನೂ ಪೂರ್ತಿ ವಿವರವಾಗಿ ತಿಳಿದುಕೊಳ್ಳೋಣ.

ಸೃಷ್ಠಿ ಎಂದರೆ ತಯಾರು ಮಾಡಿರುವುದೆಂದು ಅರ್ಥ. ಈಗ ಕಾಣಿಸುವ ಈ ವಿಶ್ವವೆಲ್ಲವೂ ಒಂದು ಸಮಯದಲ್ಲಿ ತಯಾರು ಮಾಡಿರುವುದೇ. ಒಂದು ಸಮಯದಲ್ಲಿ ಇಲ್ಲದಿರುವುದು ಯಾವುದಾದರೂ ನಂತರ ಇದ್ದರೆ ಅದು ಸೃಷ್ಠಿಸಿರುವುದೆಂದು ಅರ್ಥ. ಒಂದು ಸಮಯದಲ್ಲಿ ಇಲ್ಲದ ಪಾತ್ರೆಯನ್ನು ಒಬ್ಬ ಮನುಷ್ಯ ತಯಾರು ಮಾಡುವುದು ಎಲ್ಲರಿಗೂ ತಿಳಿದ ವಿಷಯವೇ. ಇಲ್ಲದ ಪಾತ್ರೆಯನ್ನು ತಯಾರು ಮಾಡಿ ಇಟ್ಟಿದವನನ್ನು ಸೃಷ್ಠಿಕರ್ತ ಎಂದು ಅನ್ನುತ್ತಿದ್ದೇವೆ. ಮೊದಲು ಇಲ್ಲದೇ ಇರುವುದನ್ನು ಯಾವುದನ್ನಾದರೂ ನಿರ್ಮಿಸಿದ ಅಥವಾ ತಯಾರಿಸಿದವನನ್ನು ಸೃಷ್ಠಿಕರ್ತ ಎನ್ನುವ ಸೂತ್ರದ ಪ್ರಕಾರ, ಮೊದಲು ಇಲ್ಲದ ಈ ವಿಶ್ವವೆಲ್ಲವನ್ನೂ ತಯಾರು ಮಾಡಿದವನನ್ನು ಸೃಷ್ಠಿಕರ್ತ ಎಂದು ಅನ್ನುತ್ತಿದ್ದೇವೆ. ಈಗ ಸೃಷ್ಠಿಕರ್ತರು ಎರಡು ವಿಧಗಳಾಗಿ ಇದ್ದಾರೆಂದು ಸಹ ಹೇಳಿಕೊಳ್ಳಬಹುದು. ಅದು ಹೇಗೆಂದರೆ! ಮೊದಲು ಏನೂ ಇಲ್ಲದೇ ಇರುವಾಗ ಯಾರಿಗೂ ತಿಳಿಯದ ವಿಧಾನದಿಂದ ಪಂಚಭೂತಗಳಾದ ಪ್ರಪಂಚವನ್ನು, ಜೀವಶಕ್ತಿಯಿಂದ ಕೂಡಿಕೊಂಡ ಶರೀರಗಳ ಜಗತಿಯನ್ನು, ಪ್ರಪಂಚವನ್ನು ಜಗತಿಯನ್ನು ಹೊಂದಿದ ಒಟ್ಟಾರೆ ವಿಶ್ವವನ್ನು ತಯಾರು ಮಾಡುವುದು ಒಂದು ವಿಧವಾಗಿ ಇದೆ. ಮೊದಲೇ ತಯಾರಾದ ಪಂಚಭೂತಗಳಿಂದ ಪ್ರತ್ಯೇಕವಾದ ಯಂತ್ರವನ್ನೋ, ವಸ್ತುವನ್ನೋ, ಪದಾರ್ಥವನ್ನೋ ತಯಾರು ಮಾಡುವುದು ಮತ್ತೊಂದು ವಿಧಾನವಾಗಿದೆ. ಎರಡು ವಿಧಾನಗಳಲ್ಲಿ, ಏನೂ ಇಲ್ಲದಿರುವಾಗ ಯಾವ ಆಧಾರ, ಯಾವ

ಸೂತ್ರ ಇಲ್ಲದೇ ತಯಾರುಮಾಡಿದ ಸೃಷ್ಟಿಕರ್ತ ಒಬ್ಬನಾದಾಗ, ಎಲ್ಲಾ ಇರುವಾಗ ಅವುಗಳಿಂದ ಅವುಗಳ ಆಧಾರದಿಂದ ಒಂದು ಸೂತ್ರವನ್ನನುಸರಿಸಿ ತಯಾರು ಮಾಡಿದ ಸೃಷ್ಟಿಕರ್ತ ಎರಡನೆಯವನು. ಯಾವ ಆಧಾರ ಯಾವ ಸೂತ್ರ ಇಲ್ಲದೆ ಜೀವರೂಪ ಪ್ರಪಂಚವನ್ನೇ ತಯಾರು ಮಾಡಿದವನು ಯಾವನೋ ಅವನ ಹೆಸರೇನೋ ನಮಗೆ ತಿಳಿಯದೆಂದೇ ಹೇಳಬೇಕು. ಪದಾರ್ಥಗಳ ಆಧಾರದಿಂದ ಸೂತ್ರದ ಪ್ರಕಾರ ಜೀವರಹಿತ ಯಂತ್ರವನ್ನು ತಯಾರು ಮಾಡಿದವನು **ಮನುಷ್ಯನೆಂದು** ಎಲ್ಲರೂ ಹೇಳಬಲ್ಲರು. ಪ್ರಪಂಚದಲ್ಲಿ ಒಂದು ಯಂತ್ರವನ್ನು ಮಾಡಿದವನನ್ನು ಹುಡಿಕಿ ಹಿಡಿದುಕೊಳ್ಳಬಹುದು, ಅವನ ಹೆಸರು ಇದು ಎಂದು ಹೇಳಬಹುದು. ಆದರೆ ಜಗತ್ತು, ಪ್ರಪಂಚ ಮಿಳಿತಗೊಂಡಿರುವ ವಿಶ್ವವನ್ನು ತಯಾರು ಮಾಡಿದವನನ್ನು ಯಾರೂ ಹುಡುಕಿ ಹಿಡಿದುಕೊಳ್ಳಲಾರರು, ಅವನ ಹೆಸರು ಇದು ಎಂದು ಯಾರೂ ಹೇಳಲಾರರು. ವಿಶ್ವವನ್ನು ಸೃಷ್ಟಿಸಿದವನನ್ನು ತಿಳಿದುಕೊಳ್ಳಬೇಕೆಂದರೆ ಎಷ್ಟು ಕಾಲ ಹುಡುಕಿದರೂ ಅವನು ತಿಳಿಯುವವನಲ್ಲ. ಆದ್ದರಿಂದ ಆ ಸೃಷ್ಟಿಕರ್ತ ಎಂದಿಗೂ ಹುಡುಕಬೇಕಾದವನೇ ಎಂದು, ಅಥವಾ ಎಷ್ಟು ಕಾಲವಾದರೂ ದೇವಲ್ಪಡುವವನು ಎಂದು ಬಿರುದಾಗಿ ಆತನನ್ನು **"ದೇವರು"** ಎಂದಿದ್ದಾರೆ. ದೇವರೆಂದರೆ ಯಾರಿಗೂ ತಿಳಿಯುವವನಲ್ಲವೆಂದು ಅರ್ಥ. ಆದ್ದರಿಂದ ಆತನನ್ನು ಯಾರೂ ಇಲ್ಲಿಯವರೆಗು ನೋಡಲಿಲ್ಲವೆನ್ನುವ ಮಾತು ಸತ್ಯ. ದೇವರು ಎನ್ನುವುದು ಹೆಸರಲ್ಲವೆಂದು ಆತನಿಗಿರುವ ಬಿರುದು ಎಂದು ನೆನಪಲ್ಲಿಟ್ಟುಕೊಳ್ಳಬೇಕು. ಹಾಗೆಯೇ ತಯಾರಿಸಿದ್ದಾನಾದ್ದರಿಂದ ಸೃಷ್ಟಿಕರ್ತ ಎನ್ನುತ್ತಿದ್ದೇವೆ ಆದರೆ ಅದೂ ಸಹ ಹೆಸರಲ್ಲ. ದೇವರಿಗೆ ಹೆಸರೂ ಇಲ್ಲ, ಹಾಗೇ ರೂಪವೂ ಇಲ್ಲ. ಮನುಷ್ಯನಿಗೆ ಮಾತ್ರ ಹೆಸರೂ ಇದೆ, ರೂಪವೂ ಇದೆ. **ಒಂದು ಯಂತ್ರವನ್ನು ಮಾಡಿದ ಸೃಷ್ಟಿಕರ್ತ ಮನುಷ್ಯನಾದಾಗ, ಮನುಷ್ಯನನ್ನು, ಪ್ರಪಂಚವನ್ನೂ ತಯಾರು ಮಾಡಿದ ಸೃಷ್ಟಿಕರ್ತ ದೇವರು.**

ಮನುಷ್ಯ ಮಾಡಿರುವುದು ಯಾವುದಾದರೂ ಮತ್ತೊಬ್ಬ ಮನುಷ್ಯನಿಗೆ ಅರ್ಥವಾಗುತ್ತದೆ. ಆದರೆ ದೇವರು ಮಾಡಿದ ಪಂಚಭೂತಗಳಲ್ಲಿ ಯಾವುದೂ

ಇಲ್ಲಿಯವರೆಗು ಮನುಷ್ಯನಿಗೆ ಅರ್ಥವಾಗಲಿಲ್ಲ. ಆಕಾಶದಲ್ಲಿ ಗ್ರಹಗಳೆಷ್ಟೋ, ನಕ್ಷತ್ರಗಳೆಷ್ಟೋ ಸಹ ಇಂದಿಗೂ ತಿಳಿದಿಲ್ಲ. ಹಾಗೇ ಉಳಿದ ಗಾಳಿ, ಅಗ್ನಿ, ನೀರು, ಭೂಮಿ ಯೊಂದರ ಬಲವೆಷ್ಟೋ ಸಹ ತಿಳಿದಿಲ್ಲ. ಅಷ್ಟೇ ಅಲ್ಲದೇ ಮನುಷ್ಯ ಶರೀರ ನಿರ್ಮಾಣದಲ್ಲಿನ ಕೆಲವು ಆಂತರ್ಯಗಳು ಇಲ್ಲಿಯವರೆಗು ಯಾರಿಗೂ ಅರ್ಥವಾಗಲಿಲ್ಲ. ಕೆಲವು ರೋಗಗಳಿಗೆ ಔಷಧಿಯೇ ತಿಳಿದಿಲ್ಲ. ಕೆಲವು ರೋಗಗಳು ಏಕೆಬರುತ್ತಿವೆಯೋ ಸಹಾ ತಿಳಿದಿಲ್ಲ. ಈ ವಿಧವಾಗಿ ದೇವರು ಮಾಡಿದ ವಿಶ್ವವನ್ನು ಕುರಿತು ಪೂರ್ತಿ ತಿಳಿಯದ ಸ್ಥಿತಿಯಲ್ಲಿ ಮಾನವನಿದ್ದಾನೆ. ದೇವರು ಮಾಡಿದ ವಿಶ್ವವೇ ಅರ್ಥವಾಗದಿರುವಾಗ ದೇವರು ಯಾರಿಗೆ ತಿಳಿಯಬಲ್ಲನು? ಆದ್ದರಿಂದ ಆತನು ಯಾರಿಗೂ ತಿಳಿಯದವನೆಂದು ಅರ್ಥಬರುವಹಾಗೆ ದೇವರೆಂದಿದ್ದೇವೆ.

ದೇವರ ವಿಷಯ ಯಾವ ಸ್ವಲ್ಪವೂ ಸಹ ಮಾನವನಿಗೆ ತಿಳಿದಿಲ್ಲ, ಆದ್ದರಿಂದ ದೇವರೇ ಸ್ವತಃವಾಗಿ ತನ್ನ ಅಡ್ರಸ್‌ನ್ನು ಮನುಷ್ಯನಿಗೆ ತಿಳಿಸಬೇಕೆಂದುಕೊಂಡಿದ್ದಾನೆ. ಆಕಾರ ಹೆಸರಿಲ್ಲದ ದೇವರು ಮನುಷ್ಯನೊಂದಿಗೆ ಮಾತನಾಡಿ ಹೇಳಬೇಕಾಗಿ ಬಂದಾಗ ಮನುಷ್ಯನಾಕಾರದಲ್ಲಿಯೇ ಬಂದು ಮನುಷ್ಯನ ಭಾಷೆಯಲ್ಲೇ ಹೇಳಬೇಕಾಗಿಬಂದಿದೆ. ಹಾಗೆ ತನ್ನ ವಿಷಯವನ್ನು ಹೇಳಿದಾಗ ತಾನು ತಯಾರು ಮಾಡಿ, ತನ್ನೊಂದಿಗೆ ಸಮಾನವಾದ ಶಕ್ತಿಯನ್ನು ಕೊಟ್ಟು, ಮನುಷ್ಯರಲ್ಲಿ ಜೋಡಣೆ ಮಾಡಿಟ್ಟಿರುವ ಕಣ್ಣಿಗೆ ಕಾಣಿಸದ ಒಂದನ್ನು ಕುರಿತು ಸಹ ಹೇಳುವನು. ದೇವರಿಂದ ಸೃಷ್ಠಿಸಲ್ಪಟ್ಟು, ಮನುಷ್ಯರ ತಲೆಯಲ್ಲಿ ಗುಣಗಳ ರೂಪದಲ್ಲಿ ಒಳಗೊಂಡು, ಮಾನವಲೋಕವನ್ನು ಯಂತ್ರದಹಾಗೆ ನಡೆಸುವುದನ್ನು **"ಮಾಯೆ"** ಎಂದು ಅನ್ನುತ್ತಿದ್ದೇವೆ. ದೇವರು ಸೃಷ್ಠಿಸಿದ ವಿಶ್ವದಲ್ಲಿ ಜೀವರಾಶಿಗಳ ಶರೀರಗಳನ್ನು ಸಾಯಿಸುವುದು, ಪುನಃ ಶರೀರವನ್ನು ತಯಾರಿಸಿ ಜೀವಿಗಳನ್ನು ಹುಟ್ಟಿಸುವುದು **ಮಾಯಯೇ!** ದೇವರ ಆಜ್ಞೆಯಿಂದ ಮನುಷ್ಯರ ಸಾವುಹುಟ್ಟುಗಳನ್ನು ಉಂಟುಮಾಡುವ ಮಾಯೆಯನ್ನು ತಿಳಿದುಕೊಳ್ಳುವುದು ದುಸ್ಸಾಧ್ಯವೆಂದು ದೇವರೇ ಹೇಳಿದ್ದಾನೆ. ದುಸ್ಸಾಧ್ಯವಾದ ಮಾಯೆಯನ್ನು

ತಿಳಿಯಬೇಕೆಂದರೆ ದೇವರ ಜ್ಞಾನವಿರುವವರಿಗೇ ಸಾಧ್ಯವಾಗುತ್ತದೆಂದು ಸಹಾ ಭಗವದ್ಗೀತೆಯಲ್ಲಿ ದೇವರೇ ಹೇಳಿದ್ದಾನೆ. ಮಾಯೆ ಯೊಂದರ ಮುಖ್ಯವಾದ ಕೆಲಸ ಏನೆಂದರೆ! ಮನುಷ್ಯರ ಜೀವನಗಳನ್ನು ತನ್ನ ಗುಣಗಳಿಂದ ಪ್ರವರ್ತಿಸುವಹಾಗೆ ಮಾಡುತ್ತಾ, ದೈವವೊಂದರ ಧ್ಯಾಸ ಮಾನವರಲ್ಲಿ ಇಲ್ಲದಂತೆ ಮಾಡುತ್ತಿರುವುದು. ಒಂದು ವೇಳೆ ಯಾರಿಗಾದರೂ ದೇವರ ಮೇಲೆ ಧ್ಯಾಸ ಏರ್ಪಟ್ಟು ದೇವರ ವಿಷಯವನ್ನು ತಿಳಿದುಕೊಳ್ಳಬೇಕೆಂದುಕೊಂಡರೆ, ಅವನಿಗೆ ಮಾಯೆ ತನ್ನ ವೊಂದರ ಜ್ಞಾನವನ್ನೇ ತಿಳಿಸಿ, ಅದೇ ದೈವಜ್ಞಾನವೆಂದು ನಂಬುವಹಾಗೆ ಮಾಡುತ್ತದೆ. ತಲೆಯಲ್ಲೇ ತಿಷ್ಟಹಾಕಿ ಗುಣಗಳಿಂದ ಮಾನವನನ್ನು ನಡೆಸುವ ಮಾಯೆ, ತನ್ನನ್ನು ಯಾರೂ ಗುರುತಿಸದಹಾಗೆ ಇದ್ದು, ಮಾನವನನ್ನು ದೇವರ ಮಾರ್ಗದಲ್ಲೇ ಪ್ರಯಾಣಿಸುವಹಾಗೆ ನಂಬಿಸಿ, ದೇವರಿಗೆ ದೂರವಾಗುವಹಾಗೆ ಮಾಡುತ್ತಿರುತ್ತದೆ. ಅಂತಹ ಮನುಷ್ಯನಿಗೆ ದೇವರೇ ಬಂದು ನೀನು ದೇವರ ಮಾರ್ಗದಲ್ಲಿ ಇಲ್ಲ, ಮಾಯೆ ಮಾರ್ಗದಲ್ಲಿ ಇದ್ದೀಯೆಂದು ಹೇಳಿದರೂ, ಹೇಳುವವನೇ ಮಾಯೆ ಪ್ರತಿನಿಧಿ ಎಂದು ಅಂದುಕೊಳ್ಳುತ್ತಾನೆ ಹೊರತು ಮನುಷ್ಯ ತನ್ನ ಮಾರ್ಗವನ್ನು ಬಿಡುವುದಿಲ್ಲ. ಮನುಷ್ಯನಿಗೆ ಎಷ್ಟೋ ದೊಡ್ಡ ಜ್ಞಾನವೂ ವಿಚಕ್ಷಣಾ ಶಕ್ತಿ ಇದ್ದರಾಗಲಿ ಮಾಯೆಯನ್ನು ಗುರುತಿಸಲಾರನು. ಆದ್ದರಿಂದಲೇ ಮಾಯೆಯನ್ನು ಗುರುತಿಸಬೇಕೆಂದರೆ ಎಷ್ಟೋ ಜ್ಞಾನವಿರಬೇಕೆಂದು ಮೊದಲೇ ಹೇಳಿದ್ದೇವೆ. ಜಗತ್ತನ್ನು ಸೃಷ್ಟಿಸಿದ ದೇವರು ಜಗತ್ತನ್ನು ನಡೆಸುವ ವಿಧಾನವನ್ನು ಮಾಯೆಗೆ ಒಪ್ಪಿಸಿದ್ದಾನೆಂದು ಮೊದಲೇ ಹೇಳಿಕೊಂಡಿದ್ದೇವಲ್ಲ! ಮಾಯೆಯಿಂದ ನಡೆಯಲ್ಪಡುವ ಮನುಷ್ಯ ದೇವರೊಬ್ಬನಿದ್ದಾನೆನ್ನುವ ಧ್ಯಾಸವನ್ನು ಮರೆತುಹೋಗಿದ್ದಾನೆ. ಸೃಷ್ಟಿಸಿದ ದೇವರು ಕಾಣಿಸುವುದಿಲ್ಲ, ನಡೆಸುತ್ತಿರುವ ಮಾಯ ಕಾಣಿಸುವುದಿಲ್ಲ. ಅಂತಹದರಲ್ಲಿ ಮನುಷ್ಯನಿಗೆ ಕಾಣಿಸುವುದೆಲ್ಲಾ ತನಗೆ ತಾನೇ ಮಾಡಿಕೊಳ್ಳುತ್ತಿರುವಹಾಗೆ ತಿಳಿಯುತ್ತಿದೆ. ಆದ್ದರಿಂದ ಎಲ್ಲಾ ಕೆಲಸಗಳು ನಾನೇ ಮಾಡುತ್ತಿದ್ದೇನೆಂದು, ನಾನೇ ಯೋಚಿಸುತ್ತಿದ್ದೇನೆಂದು, ಎಲ್ಲಾ ನನ್ನ ಬಲವೇ ಎಂದು, ಎಲ್ಲಾ ನನ್ನ ಬುದ್ಧಿಬಲವೇ ಎಂದು, ನಾನೆ ಹುಟ್ಟಿದ್ದೇನೆ, ನನ್ನ ಇಷ್ಟಬಂದಹಾಗೆ ಜೀವಿಸುತ್ತಿದ್ದೇನೆಂದು, ನಾನೇ ಸಾಯುತ್ತಿದ್ದೇನೆಂದು

ಅಂದುಕೊಳ್ಳುತ್ತಿದ್ದಾನೆ. ಅಂತಹವನು ಪೂರ್ತಿ ಮಾಯವಶದಲ್ಲಿ ಇದ್ದಾನೆಂದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು.

ಮಾನವನು ಏನೆಂದುಕೊಂಡರೂ ಸರ್ವಸೃಷ್ಠಿಗೂ, ಮಾನವನಿಗೂ, ಎಲ್ಲರಿಗೂ ದೊಡ್ಡವನು ಒಬ್ಬ ದೇವರೇ. ದೇವರ ಜ್ಞಾನವನ್ನು ಮೀರಿದ ಜ್ಞಾನವಾಗಲೀ, ದೇವರನ್ನು ಮೀರಿರುವುದು ಯಾವುದಾಗಲೀ ಎಲ್ಲೂ ಇಲ್ಲ. ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನ ಯೋಗದಲ್ಲಿ 40ನೇ ಶ್ಲೋಕದಲ್ಲಿ ದೇವರೊಂದರ ವಿಶ್ವರೂಪ ನೋಡಿದ ನಂತರ ಅರ್ಜುನನು ಆಶ್ಚರ್ಯವಾಗಿ **"ಓ ದೇವಾ ನೀನು ಅಣುವಣುವಿನಲ್ಲಿ ವ್ಯಾಪಿಸಿದ್ದೀಯ. ನೀನಿಲ್ಲದ ಸ್ಥಳವಾಗಲಿ, ನೀನಿಲ್ಲದ ವಸ್ತುವಾಗಲಿ ಇಲ್ಲ. ಮೇಲೆ, ಕೆಳಗೆ, ಪಕ್ಕದಲ್ಲೆಲ್ಲಾ ತುಂಬಿಕೊಂಡಿದ್ದೀಯ. ಆದ್ದರಿಂದ ನಿನಗೆ ಮೇಲಕ್ಕೆ ಮುಗಿಯುತ್ತಿದ್ದೇನೆ, ಕೆಳಗೆ ಮುಗಿಯುತ್ತಿದ್ದೇನೆ, ಪಕ್ಕಕ್ಕೆ ಮುಗಿಯುತ್ತಿದ್ದೇನೆ"** ಎಂದಿದ್ದಾನೆ. ಇದನ್ನನುಸರಿಸಿ ದೇವರು ಸರ್ವವ್ಯಾಪಿ ಎಂದು ತಿಳಿಯುತ್ತಿದೆ. ಅಷ್ಟೇ ಅಲ್ಲದೇ ಆತನನ್ನು ಮೀರಿರುವುದು ಯಾವುದೂ ಇಲ್ಲವೆಂದು ತಿಳಿಯುತ್ತಿದೆ. ಅಷ್ಟು ದೊಡ್ಡ ದೇವರನ್ನು ನಾವು ಅರ್ಥ ಮಾಡಿಕೊಳ್ಳುವುದಕ್ಕೆ ಎಷ್ಟೋ ಜ್ಞಾನವನ್ನು ತಿಳಿದ ಹಿರಿಯರು ಎಷ್ಟೋ ವಿಧಗಳಲ್ಲಿ ಹೇಳಿದ್ದಾರೆ. ಆದರೂ ದೇವರು ಅಷ್ಟು ಸುಲಭವಾಗಿ ಅರ್ಥವಾಗುವವನಲ್ಲ, ಆದ್ದರಿಂದ ನಾವು ಆತನನ್ನು ಇನ್ನೂ ವಿಶಧೀಕರಿಸಿಕೊಂಡು ಹೇಳಿಕೊಳ್ಳಬೇಕಾದ ಅಗತ್ಯವಿದೆ. ಆ ಪ್ರಯತ್ನದಲ್ಲಿ ನಾನು ಹೇಳುವುದೇನೆಂದರೆ!

ದೇವರಿಂದ ಸೃಷ್ಠಿಸಲಾಗಿರುವ ವಿಶ್ವವನ್ನು ಪ್ರಪಂಚವೆಂದು ಜಗತ್ತೆಂದು ಎರಡು ಭಾಗಗಳಾಗಿ ವಿಭಜಿಸಿಕೊಂಡಿದ್ದೇವೆ. ಪ್ರಪಂಚ ಎಂದರೆ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ. ಹಾಗೆ ಜಗತ್ತು ಎಂದರೆ ಪ್ರಾಣವಿರುವ ಸಮಸ್ತ ಜೀವರಾಶಿಗಳೆಂದು ಹೇಳಿಕೊಳ್ಳಬಹುದು. ಈಗ ಪ್ರಪಂಚ + ಜಗತಿ= ವಿಶ್ವವೆಂದು ಸುಲಭವಾಗಿ ಹೇಳಿಕೊಳ್ಳಬಹುದು. ಸೃಷ್ಠಿಕರ್ತನಾದ ದೇವರು ವಿಶ್ವವೆಲ್ಲಾ ವ್ಯಾಪಿಸಿದ್ದಾನೆ. ವಿಶ್ವವೆಲ್ಲಾ ಅಣುಅಣುವಿನಲ್ಲಿ ವ್ಯಾಪಿಸಿದ ದೇವರು ಮೂರು ವಿಧಗಳಾಗಿ ವ್ಯಾಪಿಸಿದ್ದಾನೆಂದು ಹೇಳಬಹುದು. ಹೇಗೆಂದರೆ! ಪ್ರಪಂಚದಲ್ಲಿ

ಒಂದು ಭಾಗವಾಗಿ, ಜಗತ್ತಲ್ಲಿ ಎರಡು ಭಾಗಗಳಾಗಿ ವ್ಯಾಪಿಸಿದ್ದಾನೆ. ಕೆಲವರಿಗೆ ಈ ಮಾತು ಸ್ವಲ್ಪ ವಿಚಿತ್ರವಾಗಿ ಕಾಣಿಸಿದರೂ ಇದು ಪೂರ್ತಿ ಸತ್ಯ ಮತ್ತು ಶಾಸ್ತ್ರಬದ್ಧ. ಇದೇ ವಿಷಯವನ್ನೇ ಇನ್ನೂ ಸ್ವಲ್ಪ ವಿಶದೀಕರಿಸಿಕೊಂಡು ಹೇಳಿ ಕೊಂಡರೆ, ಸೃಷ್ಠಿಗೆ ಪೂರ್ವ ಒಬ್ಬನೇಯಾದ ದೇವರು ಸೃಷ್ಠಿ ನಂತರ ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿದ್ದಾನೆ. ಆ ಮೂರು ಭಾಗಗಳ ಹೆಸರುಗಳೆ 1) ಕ್ಷರ 2) ಅಕ್ಷರ 3) ಪುರುಷೋತ್ತಮರೆಂದು ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ 16, 17 ಶ್ಲೋಕಗಳಲ್ಲಿ ಹೇಳಲಾಗಿವೆ. ಒಬ್ಬನೇ ದೇವರನ್ನು ಮೂವರು ಪುರುಷರಾಗಿ ಗೀತೆಯಲ್ಲಿ ಹೇಳಿದ್ದಾರೆ. ಒಬ್ಬರು ಕ್ಷರ ಪುರುಷನೆಂದು, ಎರಡನೆಯವನು ಅಕ್ಷರಪುರುಷನೆಂದು, ಮೂರನೆಯವನು ಮೊದಲಿರುವ ಇಬ್ಬರು ಪುರುಷರಿಗಿಂತಲೂ ಉತ್ತಮವಾದವನೆಂದು ಹೇಳುತ್ತಾ ಪುರುಷೋತ್ತಮನೆಂದಿದ್ದಾರೆ. ಪುರುಷೋತ್ತಮನೆನ್ನುವುದು ಬಿರುದೇ ಹೊರತು ಹೆಸರಲ್ಲವೆಂದು ನೆನಪಲ್ಲಿಟ್ಟುಕೊಳ್ಳಬೇಕು. ಪುರುಷೋತ್ತಮನು ಜಗತ್ತಿನಲ್ಲಿಯೂ, ಜಗತ್ತಿನ ಹೊರಗಿನ ಪ್ರಪಂಚದಲ್ಲಿಯೂ ವ್ಯಾಪಿಸಿದ್ದಾನೆ. ಅಂದರೆ ಶರೀರದ ಒಳಗೂ ಶರೀರದ ಹೊರಗೂ ದೇವರು ವ್ಯಾಪಿಸಿದ್ದಾನೆಂದು ಅರ್ಥ. ಶರೀರದ ಹೊರಗಿಲ್ಲದೇ ಶರೀರದೊಳಗೆ ಮಾತ್ರ ಶರೀರವೆಲ್ಲಾ ವ್ಯಾಪಿಸಿದವನು ಅಕ್ಷರ ಪುರುಷನು. ಶರೀರದ ಹೊರಗಾಗಲೀ, ಶರೀರವೆಲ್ಲಾ ಆಗಲೀ ಇಲ್ಲದೆ ಶರೀರದಲ್ಲಿ ಒಂದು ಕಡೆ ರವೆಯಷ್ಟು ಜಾಗದಲ್ಲಿ ಇರುವವನು ಕ್ಷರ ಪುರುಷನು.

ಈ ವಿಧವಾಗಿ ವಿಶ್ವವೆಲ್ಲವೂ ತುಂಬಿರುವ ದೈವ ಕ್ಷರಾಕ್ಷರಗಳಾಗಿ ಶರೀರಗಳಲ್ಲಿಯೂ ಸಹ ಇದ್ದಾನೆ. ಈ ಕ್ಷರ, ಅಕ್ಷರ, ಪುರುಷೋತ್ತಮರನ್ನೇ ಎಲ್ಲರಿಗೂ ತಿಳಿಯುವ ವಿಧವಾಗಿ ಜೀವಾತ್ಮ, ಆತ್ಮ, ಪರಮಾತ್ಮ ಎಂದು ಸಹ ಗೀತೆಯಲ್ಲೇ ಹೇಳಿದ್ದಾರೆ. ಇದೆಲ್ಲವೂ ದೈವಜ್ಞಾನವನ್ನು ತಿಳಿದ ಮನುಷ್ಯನಿಗೆ, ಭಗವದ್ಗೀತೆಯನ್ನು ಅರ್ಥಮಾಡಿಕೊಂಡ ಮನುಷ್ಯನಿಗೆ, ಸಂಪೂರ್ಣ ಜ್ಞಾನಿ ಆದವನಿಗೆ ತಿಳಿಯುತ್ತದೆ. ಭಗವದ್ಗೀತೆ ತಿಳಿಯದವನಿಗಾಗಲಿ, ದೈವಜ್ಞಾನ ತಿಳಿಯದ ಮನುಷ್ಯನಿಗಾಗಲಿ ಮೂರು ಆತ್ಮಗಳನ್ನು ಕುರಿತು ಯಾವ ಸ್ವಲ್ಪವೂ ತಿಳಿದಿಲ್ಲ.

ಜ್ಞಾನವಿಲ್ಲದ ಮನುಷ್ಯ ದೇವರನ್ನು ಮರೆತು, ತನ್ನನ್ನು ಮಾತ್ರವೇ ಜ್ಞಾಪಕದಲ್ಲಿಟ್ಟುಕೊಂಡು, ನಾನೇ ಎಲ್ಲವನ್ನೂ ಮಾಡುತ್ತಿದ್ದೇನೆ ಎಂದುಕೊಳ್ಳುತ್ತಿರುವ ನೆಂದು ಮೊದಲೇ ಹೇಳಿಕೊಂಡಿದ್ದೇವೆ. ಈ ವಿಧವಾಗಿ ಮನುಷ್ಯರಲ್ಲಿ ದೇವರ ಜ್ಞಾನ ತಿಳಿದು ದೈವಮಾರ್ಗದಲ್ಲಿ ಇರುವವರು ಇದ್ದಾರೆ. ಹಾಗೆ ದೈವಜ್ಞಾನ ತಿಳಿಯದೆ ಮಾಯೆ ಪ್ರಭಾವವನ್ನೂ ಸಹ ತಿಳಿಯದೆ ಮಾಯೆ ಮಾರ್ಗದಲ್ಲಿ ಸಿಲುಕಿಕೊಂಡವರೂ ಸಹ ಇದ್ದಾರೆ. ದೈವಜ್ಞಾನ ತಿಳಿದವನಿಗೆ ಮಾಯೆ ವಿಧಾನವೂ ಸಹ ತಿಳಿದಿರುತ್ತದೆ. ಆದ್ದರಿಂದ ಮಾಯೆಯಲ್ಲಿ ಸಿಲುಕಿಕೊಳ್ಳದೆ ಜಾಗ್ರತೆ ಯಿಂದಿರುವನು. ದೈವಜ್ಞಾನ ತಿಳಿಯದವನಿಗೆ ಮಾಯೆ ಎಂದರೆ ಏನೋ ಸಹಾ ತಿಳಿಯದು, ಆದ್ದರಿಂದ ಅವನು ಮಾಯೆ ಮಾರ್ಗದಲ್ಲಿ ತಿಳಿಯದೇನೇ ಇರುತ್ತಾನೆ.

ಜ್ಞಾನ ತಿಳಿದು ದೈವಮಾರ್ಗದಲ್ಲಿ ಇರುವವನು ದೇವರನ್ನು ದೊಡ್ಡದಾಗಿ ಭಾವಿಸಿಕೊಂಡಿರುತ್ತಾನೆ. ಜ್ಞಾನ ತಿಳಿಯದೆ ಮಾಯೆಮಾರ್ಗದಲ್ಲಿ ಇರುವವನು ದೇವರಿದ್ದಾನೆನ್ನುವ ಮಾತನ್ನು ಮರೆತು, ಮನುಷ್ಯನಿಗಿಂತ ಮೀರಿದ ದೇವರು ಇಲ್ಲವೆನ್ನುತ್ತಿರುತ್ತಾನೆ. ಜ್ಞಾನಿ ಲೆಕ್ಕದಲ್ಲಿ ದೇವರ ಗುರುತು ಒಂದು ವಿಧವಾಗಿರುವಾಗ, ಅಜ್ಞಾನಿ ಲೆಕ್ಕದಲ್ಲಿ ದೇವರ ಗುರುತು ಮತ್ತೊಂದು ವಿಧವಾಗಿ ಇರುತ್ತದೆ. ಇನ್ನೂ ವಿವರವಾಗಿ ಹೇಳಿಕೊಂಡರೆ ಜ್ಞಾನಿ ಲೆಕ್ಕದಲ್ಲಿ ದೇವರ ಕೋಡ್ ಒಂದು ವಿಧವಾಗಿ ಇದ್ದರೆ, ಅಜ್ಞಾನಿ ಲೆಕ್ಕದಲ್ಲಿ ದೇವರ ಕೋಡ್ ಇನ್ನೊಂದು ವಿಧವಾಗಿ ಇರುತ್ತದೆ. ನಾವು ಚೆನ್ನಾಗಿ ಅರ್ಥ ಮಾಡಿಕೊಳ್ಳುವುದಕ್ಕೆ ಕೋಡ್ ರೂಪದಲ್ಲಿ ಹೇಳಿಕೊಳ್ಳಬೇಕಾಗಿ ಬಂದಿದೆ. ಮೊದಲು ಜ್ಞಾನಿ ಲೆಕ್ಕದಲ್ಲಿ ದೇವರ ಕೋಡ್ ಹೇಗಿರುತ್ತದೋ ತಿಳಿದುಕೊಳ್ಳೋಣ. ಸಂಖ್ಯೆಗಳಲ್ಲಿ ಎಲ್ಲದಕ್ಕಿಂತ ದೊಡ್ಡದು "9" ಚಿಕ್ಕದು "0". ಸೊನ್ನೆಯಿಂದ ಮೇಲಕ್ಕೆ ಬಂದರೆ ಎಲ್ಲದಕ್ಕಿಂತ ದೊಡ್ಡದು ಒಂಬತ್ತೇ ಆಗುತ್ತದೆ. ಒಂಬತ್ತನ್ನು ಮೀರಿದ ಸಂಖ್ಯೆ ಇಲ್ಲ. ಆ ವಿಧವಾಗಿಯೇ ಸೃಷ್ಠಿಯಲ್ಲಿ ಎಲ್ಲದಕ್ಕಿಂತ ದೊಡ್ಡದು ಪರಮಾತ್ಮ (ದೇವರು). ದೇವರು ವಿಶ್ವದಲ್ಲಿ ಮೂರು ಭಾಗಗಳಾಗಿ ವಿಭಜಿಸಲ್ಪಟ್ಟು ಮೂರು ಆತ್ಮಗಳಾಗಿ ಇದ್ದಾನೆ.

ಪರಮಾತ್ಮನನ್ನು (ದೇವರನ್ನು) ವಿಭಜಿಸಿದರೆ ಮೂರು ಭಾಗಗಳಾಗಿ ಇರಬೇಕು. ಜೀವಾತ್ಮ ಎಷ್ಟಾದರೆ ಇದೆಯೋ ಅದಕ್ಕಿಂತ ದೊಡ್ಡದು ಆತ್ಮ ಇರಬೇಕು. ಜೀವಾತ್ಮಗಿಂತ ಆತ್ಮ ಎಷ್ಟು ದೊಡ್ಡದೋ ಅಷ್ಟೇ ದೊಡ್ಡದಾಗಿ ಪರಮಾತ್ಮ ಇರುವ ಹಾಗೆ ತಿಳಿಯಬೇಕು. ಕೊನೆಗೆ ಪರಮಾತ್ಮದ್ದು ದೊಡ್ಡ ಸಂಖ್ಯೆ ಆಗಿರಬೇಕು. ಇದನ್ನನುಸರಿಸಿ ಪರಮಾತ್ಮಗಿಂತಲೂ ಮೂರಸಂಖ್ಯೆಗಳಿಗಿಂತ ಆತ್ಮ ಚಿಕ್ಕದೆಂದು, ಆತ್ಮಗಿಂತಲೂ ಮೂರು ಸಂಖ್ಯೆಗಳು ಜೀವಾತ್ಮ ಚಿಕ್ಕದೆಂದು ತಿಳಿಯಬೇಕು. ಈ ಲೆಕ್ಕ ಸೂತ್ರಬದ್ಧವಾದದ್ದು. ಏಕೆಂದರೆ! ಜೀವಾತ್ಮ ಆತ್ಮನೊಂದಿಗೆ ಸೇರಿದರೆ ಪರಮಾತ್ಮನೊಂದಿಗೆ ಬೆರೆತು ಹೋಗುತ್ತದೆನ್ನುವ ಸೂತ್ರ ಭಗವದ್ಗೀತೆಯಲ್ಲೇ ಇದೆ. ಜೀವಾತ್ಮ + ಆತ್ಮ = ಪರಮಾತ್ಮ ಎಂದು ಅರ್ಥ. ಅಂದರೆ ಮೊದಲು ಪರಮಾತ್ಮ ಬಿಂಬವಾಗಿ ಜೀವಾತ್ಮ ಆತ್ಮ ವಿಭಜಿಸಲ್ಪಟ್ಟಿವೆ ಎಂದು ಅರ್ಥ. ಪರಮಾತ್ಮನ ಬಿಂಬ 9 ಆದರೆ ಅದರ ಪ್ರತಿಬಿಂಬವಾದ ಆತ್ಮ ಜೀವಾತ್ಮ ಎರಡೂ ಒಂಬತ್ತೇ ಆಗಬೇಕು. 1+2=3 ಎನ್ನುವಹಾಗೆ 3+6=9 ಎಂದು ತಿಳಿದುಹೋಗಿದೆ. ಆದ್ದರಿಂದ ಯಾವ ಜೀವಿಯಾದರೂ ಪರಮಾತ್ಮನಾಗಿ ಬದಲಾಗುವುದಕ್ಕೆ ಜೀವಾತ್ಮ ಆತ್ಮನೊಂದಿಗೆ ಸೇರಿದರೇನೆ ಸಾಧ್ಯವೆಂದು **ಬ್ರಹ್ಮವಿದ್ಯಾಶಾಸ್ತ್ರವಾದ ಭಗವದ್ಗೀತೆ** ಹೇಳುತ್ತಿದೆ. ಜೀವಾತ್ಮ ಮೋಕ್ಷ ಹೊಂದುವ ಸಮಯದಲ್ಲಿ ಶರೀರದಲ್ಲಿ ಜೀವಾತ್ಮ ಆತ್ಮನೊಂದಿಗೆ ಸೇರಿದರೆ, ಆ ಪ್ರತ್ಯೇಕವಾದ ಆತ್ಮ ಪರಮಾತ್ಮನೊಂದಿಗೆ ಸೇರಿಹೋಗುವುದೆಂದು ಎಷ್ಟೋ ವರ್ಷಗಳ ಕೆಳಗೇ **"ಜನನ ಮರಣ ಸಿದ್ಧಾಂತ"** ಎನ್ನುವ ಗ್ರಂಥದಲ್ಲಿಯೂ ಸಹ ಹೇಳಿದ್ದೇವೆ.

**ಈ ವಿಧವಾಗಿ ಸೃಷ್ಠಿ ನಂತರ ಪರಮಾತ್ಮ 9:6:3 ನಿಷ್ಪತ್ತಿ ಸಂಖ್ಯೆಯಾಗಿ ಇದ್ದಾನೆಂದು ಹೇಳುತ್ತಿದ್ದೇವೆ. ದೇವರು ಮೂರು ಆತ್ಮಗಳಾಗಿ ಇದ್ದಾನಾ ಎಂದು ಯಾರಿಗಾದರೂ ಅನುಮಾನ ಬಂದರೇ ಭಗವದ್ಗೀತೆ 15ನೇ ಅಧ್ಯಾಯದಲ್ಲಿ 16,17 ಶ್ಲೋಕಗಳನ್ನು ನೋಡಿ ಅವರ ಸಂಶಯವನ್ನು ತೀರಿಸಿಕೊಳ್ಳಬಹುದು.**

***(15) ಶ್ಲೋ॥ 16 :ದ್ವಾವಿಮೌ ಪುರುಷೌ ಲೋಕೇ ಕ್ಷರ ಶ್ಚಾಕ್ಷರ ಏವಚ।***
***ಕ್ಷರ ಸ್ಸರ್ವಾಣಿ ಭೂತಾನಿ ಕೂಟಸ್ಥೋಕ್ಷರ ಉಚ್ಯತೇ ॥***
***(ಆತ್ಮ, ಜೀವಾತ್ಮ)***

***(15) ಶ್ಲೋ॥ 17: ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।***
***ಯೋ ಲೋಕತ್ರಯ ಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥***
***(ಪರಮಾತ್ಮ)***

(ಪರಮಾತ್ಮ ಮೂರು ಆತ್ಮಗಳಾಗಿ ಇದ್ದಾನೆಂದು ತಿಳಿಯುವುದಕ್ಕೆ, ಎಲ್ಲರಿಗೂ ಜ್ಞಾಪಕವಿರುವಹಾಗೆ ಪರಮಾತ್ಮನ ಗುರುತು 963 ಎಂದು ಹೇಳುತ್ತಿದ್ದೇವೆ. ಇದನ್ನೇ ಎಲ್ಲರೂ ಗುರುತಿಟ್ಟುಕೊಳ್ಳುವಹಾಗೆ ಸೃಷ್ಠಿಕರ್ತ ಕೋಡ್ 963 ಎಂದು ಬರೆದಿದ್ದೇವೆ. ಇದನ್ನೇ ತ್ರೈತ ಸಿದ್ಧಾಂತವಾಗಿ ತಿಳಿಸುತ್ತಿದ್ದೇವೆ.)

ಅಂಕೆಗಳಲ್ಲಿ ದೊಡ್ಡ ಅಂಕೆ 9 ಎಂದು, ಹಾಗೇ ಆತ್ಮಗಳಲ್ಲಿ ದೊಡ್ಡ ಆತ್ಮ ಪರಮಾತ್ಮ ಎಂದು ತಿಳಿಸಿದ್ದೇವೆ. ಈಗ ಕೆಲವರಿಗೊಂದು ಅನುಮಾನ ಬಂದು ಸಂಖ್ಯೆಗಳಲ್ಲಿ ಎಲ್ಲದಕ್ಕಿಂತ ದೊಡ್ಡ ಸಂಖ್ಯೆ ಕೋಟಿ ಅಲ್ಲವೆ! ನೀವೇನೋ ಕೇವಲ ಒಂಬತ್ತೇ ಎನ್ನುತ್ತಿದ್ದೀರ ಎಂದು ಕೇಳಬಹುದು. ಅದ್ಕಕೆ ನಮ್ಮ ಸಮಾಧಾನ ಏನೆಂದರೆ! ಬ್ರಹ್ಮವಿದ್ಯಾಶಾಸ್ತ್ರಾನುಸಾರ ಆಧ್ಯಾತ್ಮಿಕದಲ್ಲಿ ಏಕ ಸಂಖ್ಯೆಯನ್ನೇ ಲೆಕ್ಕಿಸಿಕೊಳ್ಳಬೇಕು, ದ್ವಿಸಂಖ್ಯೆಯನ್ನು ಲೆಕ್ಕಿಸಬಾರದು. ಏಕೆಂದರೆ ಇದು ದೈವಮಾರ್ಗ, ಇದರಲ್ಲಿ ಏಕಸಂಖ್ಯೆಗೇ ಬೆಲೆ. ದೇವರು ಒಬ್ಬನೇ ಎನ್ನುವ ಸೂತ್ರದ ಪ್ರಕಾರ ಎಲ್ಲಾದರೂ ದೇವರ ಜ್ಞಾನದಲ್ಲಿ ಒಂದು ಸಂಖ್ಯೆಯನ್ನೇ ತೆಗೆದುಕೊಳ್ಳಬೇಕು. ಇಲ್ಲಿ ಮತ್ತೊಂದು ಸಂಶಯ ನಿಮಗೆ ಬರಬಹುದು. **"ಇಲ್ಲಿಯವರೆಗು ದೇವರ ಗುರುತು 963 ಎಂದು ಮೂರು ಸಂಖ್ಯೆಗಳನ್ನು ನಮಗೆ ಹೇಳಿದ್ದೀರಲ್ಲ! ಈಗ ಏಕಸಂಖ್ಯೆಗೇ ಬೆಲೆ ಎನ್ನುತ್ತಿದ್ದೀರ"** ಎಂದು ಕೇಳಬಹುದು ಅದಕ್ಕೆ ಸಮಾಧಾನವೇನೆಂದರೆ! ನಾನು ಅಲ್ಲಿಯೂ ಸಹ ಸೇರಿಸಿ ಹೇಳಲಿಲ್ಲ. ಮೂರು ಆತ್ಮಗಳ ನಿಷ್ಪತ್ತಿ ಬಿಡಿಬಿಡಿಯಾಗೇ ಇದೆ. ಒಂದೊಂದು ಆತ್ಮಕ್ಕೆ

ಒಂದೊಂದು ಅಂಕೆಯನ್ನು ಸೂಚಿಸಿದ್ದೇವೆ ಎಂದು ನೆನಪಲ್ಲಿಟ್ಟು ಕೊಳ್ಳಬೇಕು. ದೊಡ್ಡ ಆತ್ಮಕ್ಕೆ "9" ಗುರುತಾದಾಗ, ಮಧ್ಯೆ ಆತ್ಮಕ್ಕೆ "6" ಗುರುತಾದಾಗ, ಚಿಕ್ಕ ಆತ್ಮವಾದ ಜೀವಾತ್ಮಕ್ಕೆ "3" ಗುರುತಾಗಿ ಇದೆಯೆಂದು ತಿಳಿಸಿದ್ದೇವೆ.

ಸೃಷ್ಠಿ ಎಲ್ಲದಕ್ಕೂ ದೊಡ್ಡವನಾದ ಪರಮಾತ್ಮನನ್ನು (ದೇವರನ್ನು) ಯಾರು ತಗ್ಗಿಸಲಾರರು ಹೆಚ್ಚಿಸಲಾರರು. ದೇವರನ್ನು ಬೇರೆಮಾಡಿ ಹೇಳಿಕೊಂಡರೂ ಹೆಚ್ಚಿಸಿ ಹೇಳಿಕೊಂಡರೂ ಆತನಿಗೆ ಯಾವ ಲೋಪ ಬರುವುದಿಲ್ಲ, ಆತನ ಬೆಲೆ ಸ್ವಲ್ಪವೂ ಕಡಿಮೆ ಆಗುವುದಿಲ್ಲ. ಹಾಗೇ ದೇವರನ್ನು, ದೊಡ್ಡ ಅಂಕೆಯಾಗಿ ಭಾವಿಸಿದ ಒಂಬತ್ತನ್ನೂ ಸಹಾ ಬೇರೆಮಾಡಿದರೂ, ಹೆಚ್ಚಿಸಿದರೂ ತನ್ನ ಏಕ ಸ್ಥಾನ ಬೆಲೆ ಬದಲಾಗುವುದಿಲ್ಲವೆಂದೇ ಹೇಳಿಕೊಳ್ಳಬಹುದು. ಅದು ಹೇಗೆ ಎಂದು ಕೆಲವರು ಕೇಳಬಹುದು. ಅದರ ಅನುಮಾನ ತೀರುವಹಾಗೆ ಒಂಬತ್ತು ಅಂಕೆಯನ್ನು ಭಾಗಗಳು ಮಾಡಿ ನೋಡೋಣ. 1,5,3 ಆಗಿ ಒಂಬತ್ತನ್ನು ಬೇರೆಮಾಡಿದಾಗ ಮೂರು ಅಂಕೆಗಳಾಗಿ ಕಾಣಿಸುತ್ತಿದೆ. ಆಧ್ಯಾತ್ಮಿಕವಿದ್ಯೆಯಲ್ಲಿ ಏಕ ಸ್ಥಾನಕ್ಕೇ ಬೆಲೆ ಆದ್ದರಿಂದ ಮೂರು ಅಂಕೆಗಳನ್ನು ಸೇರಿಸಿದರೆ 1+5+3=9 ಆಗುತ್ತದೆ. ಇಲ್ಲಿ ಯಾವ ಅಂಕೆಯನ್ನಾದರೂ ಬೇರೆಮಾಡಿರುವುದನ್ನು ಸೇರಿಸಿದರೆ ಮತ್ತೆ ಅದೇ ಅಂಕೆಬರುತ್ತದಲ್ಲವೆ ಅದರಲ್ಲಿ ಪ್ರತ್ಯೇಕಿಸಿ ಒಂಬತ್ತನ್ನೇ ಹೇಳಿಕೊಳ್ಳುವುದೇನೆಂದು ಸಹಾ ಕೆಲವರು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಬೇರೆಮಾಡಿದ ಯಾವ ಅಂಕೆಯನ್ನಾದರೂ ಪುನಃ ಸೇರಿಸಿದರೆ ಅದೇ ಆಗುತ್ತದೆ, ಅದು ವಾಸ್ತವವೆ. ಆದರೆ ನಾನು ಹೇಳಿರುವುದು ಒಂದು ಬೇರೆಮಾಡುವುದೇ ಅಲ್ಲ, ಒಂದು ಅಂಕೆಯನ್ನು ಬೇರೆಮಾಡಿದರೂ, ಹೆಚ್ಚಿಸಿದರೂ ಅದರ ಏಕ ಸ್ಥಾನವನ್ನು ಕಳೆದುಕೊಳ್ಳುವುದಿಲ್ಲ ಎಂದು ಹೇಳಿದ್ದೇನೆ. ಅದೇ ಒಂಬತ್ತು ಎಂದು ಹೇಳಿದ್ದೇನೆ. ಒಂಬತ್ತು ಹೊರತು ಯಾವ ಅಂಕೆಯಾದರೂ ಹೆಚ್ಚಿಸಿದರೆ ತನ್ನ ಏಕ ಸ್ಥಾನವನ್ನು ಕಳೆದುಕೊಳ್ಳುತ್ತದೆ. ಉದಾಹರಣೆಗೆ ಏಳನ್ನು ಎರಡರಷ್ಟು ಗುಣಿಸಿ ನೋಡೋಣ 7x2=14 ಇಲ್ಲಿ ಹದಿನಾಲ್ಕು ಆಗಿದೆ. ಅದನ್ನು ಏಕ ಸಂಖ್ಯೆ ಮಾಡಿ ನೋಡೋಣ 1+4=5

ಸೇರಿಸಿ ನೋಡಿದರೆ ಕೊನೆಗೆ ಐದಾಗಿದೆ. ಮೊದಲು ಏಳು ಹೆಚ್ಚಿಸಲ್ಪಟ್ಟು ಕೊನೆಗೆ ಐದಾಗಿ ಬದಲಾಗಿದೆ ಅಲ್ಲವೆ! ಹೀಗೆ ಒಂಬತ್ತು ವಿನಃ ಉಳಿದ ಸಂಖ್ಯೆಗಳನ್ನು ವಿಭಜಿಸಿದರೂ ಹೆಚ್ಚಿಸಿದರೂ ಅವುಗಳ ಏಕ ಸಂಖ್ಯೆ ಬೆಲೆ ಬದಲಾಗುತ್ತದೆ. ಈಗ ಉದಾಹರಣೆಯಾಗಿ ಒಂಬತ್ತನ್ನೇ ನೋಡೋಣ.

| <u>ವಿಭಜನೆ</u> | <u>ಹೆಚ್ಚಿಸುವುದು</u> |
|---|---|
| 1+8=9 | 9x1=9 – 0+9=9 |
| 2+7=9 | 9x2=18 – 1+8=9 |
| 3+6=9 | 9x3=27 – 2+7=9 |
| 4+5=9 | 9x4=36 – 3+6=9 |
| 5+4=9 | 9x5=45 – 4+5=9 |
| 6+3=9 | 9x6=54 – 5+4=9 |
| 7+2=9 | 9x7=63 – 6+3=9 |
| 8+1=9 | 9x8=72 – 7+2=9 |
| | 9x9=81 – 8+1=9 |

ವಿಶ್ವದಲ್ಲಿ ದೇವರು ಯಾವ ವಿಧವಾಗಿ ಯಾರು ಹೊಗಳಿದರೂ, ಯಾರು ಬೈದರೂ ಒಂದೇ ಬೆಲೆ ಹೊಂದಿದ್ದಾನೋ, ಅದೇ ವಿಧವಾಗಿ ದೇವರಾಗಿ ಹೋಲಿಸಿದ ಒಂಬತ್ತು ಸಹಾ ಯಾರು ಹೆಚ್ಚಿಸಿದರೂ, ಯಾರು ವಿಭಜಿಸಿದರೂ ಒಂದೇ ಬೆಲೆ ಹೊಂದಿದೆ.

ಇನ್ನು ಆರಾಗಿ ಗುರುತಿಸಲಾಗಿರುವ ಆತ್ಮ ವಿಷಯಕ್ಕೆ ಬಂದರೆ ಬಹಳ ಜನರ ಮಾತುಗಳಲ್ಲಿ ಆತ್ಮ ಎನ್ನುವ ಮಾತು ಅಲ್ಲಲ್ಲಿ ಕೇಳಿಸುತ್ತಲೇ ಇರುತ್ತದೆ. ಪ್ರತಿ ಸ್ವಾಮಿ, ಪ್ರತಿ ಬೋಧಕರ ಮಾತುಗಳಲ್ಲಿ ಆತ್ಮ ಎನ್ನುವಮಾತು ಕರೆಯಲಾಗುತ್ತಿರುತ್ತದೆ. ಆತ್ಮಹತ್ಯೆ ಎಂದು, ಆತ್ಮ ವಿಶ್ವಾಸವೆಂದು, ಆತ್ಮ ಧೈರ್ಯವೆಂದು, ಆತ್ಮಬಲವೆಂದು, ಆತ್ಮಾಭಿಮಾನವೆಂದು, ಆತ್ಮ ಔನ್ನತ್ಯವೆಂದು,

ಆತ್ಮಜ್ಞಾನವೆಂದು ಎಷ್ಟೋ ಸಂದರ್ಭಗಳಲ್ಲಿ ಆತ್ಮನನ್ನು ಉಚ್ಚರಿಸುತ್ತಲೇ ಇರುತ್ತಾರೆ. ಕೆಲವರಾದರೆ ನಾವು ಆತ್ಮಜ್ಞಾನಿಗಳೆಂದು ಪ್ರಕಟಿಸಿಕೊಂಡವರೂ ಸಹ ಇದ್ದಾರೆ. ಯಾರು ಎಷ್ಟು ವಿಧಗಳಲ್ಲಿ ಆತ್ಮನನ್ನು ಅಂದುಕೊಂಡರೂ, ಇಲ್ಲಿಯವರೆಗು ಜಗತಿಯಲ್ಲಿ ಆತ್ಮದ ನಿಜ ಸ್ವರೂಪ ಯಾರಿಗೂ ತಿಳಿಯದೆಂದೇ ಹೇಳಬಹುದು. ನೇರವಾಗಿ ಆತ್ಮಜ್ಞಾನಿಗಳಿರುವ ಈ ಕಾಲದಲ್ಲಿ ನೀವೇನು ಆತ್ಮ ಎಂದರೆ ಏನೋ ಯಾರಿಗೂ ತಿಳಿಯದೆನ್ನುತ್ತಿದ್ದೀರ ಎಂದು ಕೆಲವರು ಕೇಳಬಹುದು? ಅದಕ್ಕೆ ನಮ್ಮ ಉತ್ತರ ಏನೆಂದರೇ ಇಲ್ಲಿಯವರೆಗು ದೇಶದಲ್ಲಿ **ತ್ರೈತ ಸಿದ್ಧಾಂತ** ಇಲ್ಲ. ಅಂದರೆ ಮೂರು ಆತ್ಮಗಳ ವಿವರವಿಲ್ಲ. ಅದ್ವೈತ, ದ್ವೈತ ಇದೆ. ಆದ್ದರಿಂದ ಆತ್ಮ ಎಂದು ಯಾರಾದರೂ ಅಂದರೂ ಅದನ್ನು ಜೀವಾತ್ಮನಾಗೇ ಭಾವಿಸಿ ಹೇಳಿಕೊಳ್ಳುತ್ತಿದ್ದಾರೆ, ಆದರೆ ಪ್ರತ್ಯೇಕವಾದ ಆತ್ಮವಾಗಿ ಯಾರೂ ಹೇಳಿಕೊಳ್ಳಲಿಲ್ಲ. ಪ್ರತ್ಯೇಕವಾದ ಆತ್ಮ ನಮಗೆ ತಿಳಿದಿದೆಯೆಂದರೆ ತ್ರೈತದವರಿಗೇ ತಿಳಿದಿರಬೇಕು. ತ್ರೈತ ಇಲ್ಲಿಯವರೆಗು ತಿಳಿದಿಲ್ಲ ಆದ್ದರಿಂದ ಅದಕ್ಕೂ ಮೊದಲು ಆತ್ಮ ಎನ್ನುವ ಮಾತನ್ನು ಯಾರು ಹೇಗೆ ಹೇಳಿಕೊಂಡರೂ ಆತ್ಮವೊಂದರ ನಿಜಸ್ವರೂಪವೇನೆಂದು ಯಾರಿಗೂ ತಿಳಿಯದೆಂದೇ ಹೇಳಬಹುದು. ಆತ್ಮನನ್ನು ಕುರಿತು ನಾವು ಹೇಳುವ ಸ್ವಲ್ಪ ವಿವರವೇನೆಂದರೆ ಆತ್ಮ ಅತ್ತ ಪರಮಾತ್ಮನಿಗೂ ಇತ್ತ ಜೀವಾತ್ಮನಿಗೂ ಮಧ್ಯವರ್ತಿಯಂತದ್ದು. ಮಧ್ಯವರ್ತಿಯಾದ ಆತ್ಮನನ್ನು ಸೇರದೇ ಯಾವ ಜೀವಾತ್ಮ ಪರಮಾತ್ಮನನ್ನು ಸೇರಲಾರದು. ಅಂಕೆ ಪ್ರಕಾರ ಜೀವಾತ್ಮ ಮೂರು ಆದರೆ ದೇವರು ಒಂಬತ್ತು ಆದರೆ ಮಧ್ಯೆದಲ್ಲಿ ಆತ್ಮ ಆರು ಆಗುತ್ತದಲ್ಲವೆ! ಆದ್ದರಿಂದ ಆತ್ಮನನ್ನು ಆರಾಗಿಯೇ ಲೆಕ್ಕಿಸಿಕೊಳ್ಳಬೇಕಾಗಿ ಬಂದಿದೆ.

ಇನ್ನು ಜೀವಾತ್ಮನನ್ನು ಮೂರಾಗಿಯೇ ಏಕೆ ಲೆಕ್ಕಿಸಿಕೊಳ್ಳಬೇಕಾಗಿ ಬಂದಿದೆಯೆಂದರೆ! ಪರಮಾತ್ಮನಿಂದ ಮೂರನೆಯವನು ಜೀವಾತ್ಮ. ಪರಮಾತ್ಮ ಸಂಖ್ಯೆಯಾದ ಒಂಬತ್ತಿನಿಂದ ಸಮಾನವಾದ ಮೂರಂಕೆಗಳನ್ನು ಗುರುತಿಸಿದರೆ, ಎರಡನೆಯದು ಆತ್ಮ ಆರು ಆದಾಗ ಮೂರನೇ ಜೀವಾತ್ಮ ಮೂರೇ ಆಗುತ್ತದೆ. ಇದು ಮೇಲಿರುವ ಪರಮಾತ್ಮ ಅಂಕೆಯಿಂದ ಗುರುತಿಸಿದರೆ ಬರುವುದು.

ಹಾಗಲ್ಲದೆ ಮೊದಲು ಜೀವಾತ್ಮನನ್ನು ಮೂರಾಗಿ ಗುರುತಿಸಿದ ನಂತರವೇ ಮೂರನೆಯದಾದ ಪರಮಾತ್ಮನನ್ನು ಒಂಬತ್ತಾಗಿ ಗುರುತಿಸಬಹುದಲ್ಲವೆ ಎಂದು ಸಹ ಕೆಲವರು ಕೇಳಬಹುದು. ಆ ವಿಧವಾಗಿ ಕೆಳಗಿರುವ ಜೀವಾತ್ಮನನ್ನೇ ಮೊದಲು ಮೂರಾಗಿ ಗುರುತಿಸುವುದಕ್ಕೂ ಸಹ ಕಾರಣವಿದೆಯೆಂದು ಹೇಳಬಹುದು. ಅದೇನೆಂದರೆ! ಮನುಷ್ಯ ಹುಟ್ಟಿದಾಗಿನಿಂದ ಅವನಲ್ಲಿ ಜೀವಾತ್ಮ ಮೂರು ಗುಣಗಳ ಮಧ್ಯದಲ್ಲೇ ಸಿಲುಕಿಕೊಂಡು ನಿವಾಸ ಮಾಡುತ್ತಿರುವನು. ಶರೀರದಲ್ಲಿ ಜೀವಾತ್ಮನ ನಿವಾಸ ಬಹಳ ಜನರಿಗೆ ತಿಳಿದಿಲ್ಲ. ಪ್ರತಿ ಜೀವರಾಶಿ ತಲೆಯಲ್ಲಿನ ಬ್ರಹ್ಮ, ಕಾಲ, ಕರ್ಮ, ಗುಣ ಎನ್ನುವ ನಾಲ್ಕು ಚಕ್ರಗಳಲ್ಲಿ ಕೊನೆಯದು, ಕೆಳಗಿನದೂ ಆದ ಗುಣಚಕ್ರದಲ್ಲಿ ಜೀವಾತ್ಮ ನಿವಾಸವಿರುತ್ತಿದ್ದಾನೆ. ಗುಣಭಾಗಗಳು ಸಾತ್ವಿಕ, ರಾಜಸ, ತಾಮಸಗಳೆಂದು ಬಹಳ ಜನರಿಗೆ ತಿಳಿದಿದೆ. ಈ ಮೂರು ಗುಣ ಭಾಗಗಳಲ್ಲಿ ಹುಟ್ಟಿದಾಗಿನಿಂದ ಸಾಯುವವರೆಗೂ ಜೀವಾತ್ಮನಿದ್ದಾನೆ ಆದ್ದರಿಂದ ಜೀವಾತ್ಮನನ್ನು ಮೂರು ಎಂದು ಗುರುತಿಸಬಹುದು. ಗೀತೆಯಲ್ಲಿಯೂ ಸಹ ತ್ರಿಗುಣ ಸಹಿತನು ಜೀವಾತ್ಮನೆಂದು ಬಹಳ ಸಲ ಹೇಳಿದ್ದಾರೆ. ಮೂರು ಗುಣಗಳಲ್ಲಿ ಜೀವಾತ್ಮ ಒಳಗೊಂಡಿದ್ದಾನೆ, ಆದ್ದರಿಂದ ಆತನನ್ನು ಮೂರಾಗಿಯೇ ಗುರುತಿಸಿ ಅಲ್ಲಿಂದ ಆರನೆಯವನು ಆತ್ಮ ಎಂದೂ, ಒಂಬತ್ತನೆಯವನು ಪರಮಾತ್ಮನೆಂದೂ ಸಹ ಹೇಳಬಹುದು. ಅಲ್ಲಿ ಪರಮಾತ್ಮನನ್ನು ಒಂಬತ್ತಾಗಿ ಗುರುತಿಸುವುದಕ್ಕೆ ವಿಶೇಷತೆ ಹೇಗಿದೆಯೋ ಅದೇ ವಿಧವಾಗಿ ಇಲ್ಲಿ ಜೀವಾತ್ಮನನ್ನು ಗುರುತಿಸುವುದಕ್ಕೂ ಸಹ ಮೂರು ಗುಣಗಳ ವಿಶೇಷತೆ ಇದೆ.

ಸೃಷ್ಟಿ ಪೂರ್ವದಲ್ಲಿ ಒಂದಾಗಿರುವ ದೇವರು, ಸೃಷ್ಟಿಯಲ್ಲಿ ಮೂರು ಭಾಗಗಳಾಗಿ ವಿಭಜಿಸಲ್ಪಟ್ಟು ಪರಮಾತ್ಮ, ಅತ್ಮ, ಜೀವಾತ್ಮನಾಗಿ ಇದ್ದಾನೆ. **ಆದ್ದರಿಂದ ದೇವರನ್ನು ತ್ರೈತ ಎಂದಿದ್ದೇವೆ. ದೇವರನ್ನು ಸಿದ್ಧಾಂತರೀತ್ಯಾ ತಿಳಿಸುವ ಜ್ಞಾನವನ್ನು ತ್ರೈತ ಸಿದ್ಧಾಂತ ಎಂದಿದ್ದೇವೆ.** ಇದೆಲ್ಲವೂ ಜ್ಞಾನ ತಿಳಿದವನು ದೇವರ ವಿವರವನ್ನು ಗುರುತಿಸಬಲ್ಲನು. ಅಂತಹವನು ಸೃಷ್ಟಿಕರ್ತ ಕೋಡ್ 963 ಎಂದು ತಿಳಿಯಬಲ್ಲನು. ಇಲ್ಲಿಯವರೆಗು ದೇವರ ಗುರುತನ್ನು ತಿಳಿದುಕೊಂಡ ಪ್ರಕಾರ

ದೇವರೊಂದಿಗೆ ಸಮಾನ ಬಲವಾಗಿ ಮನುಷ್ಯನ ತಲೆಯಲ್ಲಿ ತಿಷ್ಟಹಾಕಿಕೊಂಡ ಮಾಯೆಯನ್ನು ಕುರಿತು, ಅದಕ್ಕಿರುವ ಗುರುತಿನ ಸಂಖ್ಯೆಯನ್ನು ಕುರಿತು ತಿಳಿದುಕೊಳ್ಳೋಣ. ಮಾಯೆಯಲ್ಲಿ ಒಳಗೊಂಡು, ಅದರ ಮಾರ್ಗದಲ್ಲಿ ಪ್ರವರ್ತಿಸುತ್ತಾ, ದೇವರ ಜ್ಞಾನವನ್ನು ತಿಳಿಯದವನು ದೇವರಿದ್ದಾನೆಂದಾಗಲಿ, ಆತ್ಮ ಒಂದಿದೆಯೆಂದಾಗಲಿ ತಿಳಿದಿಲ್ಲ. ಅವನಿಗೆ ತಿಳಿದಿರುವುದೆಲ್ಲಾ ತಾನೇ ಎಲ್ಲಾ ಮಾಡಿಕೊಳ್ಳುತ್ತಿದ್ದೇನೆಂದುಕೊಳ್ಳುತ್ತಿದ್ದಾನೆ. ತಾನಂದುಕೊಂಡ ಹಾಗೆ ಮಾಡುತ್ತಿದ್ದೇನೆಂದು, ನಾನೇ ಧನವನ್ನು ಸಂಪಾದಿಸಿಕೊಳ್ಳುತ್ತಿದ್ದೇನೆಂದು, ನನ್ನ ತಿಳುವಳಿಕೆಯಿಂದ ನನಗೆ ದೊಡ್ಡ ಉದ್ಯೋಗ ಬಂದಿದೆಯೆಂದು, ನಾನು ಹೇಳಿದರೇನೆ ಕೆಲವು ಕೆಲಸಗಳು ನಡೆಯುತ್ತಿವೆಯೆಂದು, ನಾನೇ ಬಲವಿರುವವನೆಂದು, ನಾನು ಭೋಗಗಳನ್ನು ನನ್ನ ಯುಕ್ತಿಯಿಂದ ಅನುಭವಿಸುತ್ತಿದ್ದೇನೆಂದು, ನಾನು ಮಾಡಿದರೇನೆ ನಡೆಯುತ್ತಿದೆಯೆಂದು ದೇವರು ಮಾಡುವುದು ಏನೂ ಇಲ್ಲವೆಂದು, ಅಂತಹದರಲ್ಲಿ ದೇವರು ಇದ್ದಾನೆನ್ನುವುದು ಅಸತ್ಯವೆಂದು, ಮನುಷ್ಯನೇ ದೇವರೆಂದು, ನನಗೆ ನಾನೇ ದೇವರೆಂದು, ನನ್ನನ್ನು ಮೀರಿದ ದೇವರು ಇಲ್ಲವೆಂದು ಅಂದುಕೊಳ್ಳುತ್ತಿರುವನು. ಅಂತಹವನಿಗೆ ಎಲ್ಲರು ಅಂದುಕೊಳ್ಳುವ ದೇವರೇ ಕಾಣಿಸದಿರುವಾಗ, ಯಾರಿಗೂ ತಿಳಿಯದ ಆತ್ಮ ತಿಳಿಯುತ್ತದಾ! ಅವನಿಗೆ ತಾನು ಜೀವಾತ್ಮ (ಶರೀರ) ಹೊರತು ಪರಮಾತ್ಮ, ಆತ್ಮ ತಿಳಿದಿಲ್ಲ. ಅಂತಹವನನ್ನು ಜ್ಞಾನವಿರುವವನು ನೋಡಿದಾಗ, ತನಗಿರುವ ಜ್ಞಾನದಿಂದ ತನ್ನಲ್ಲಿರುವ ದೇವರನ್ನು (ಆತ್ಮಗಳನ್ನು) 963 ಎಂದು ಗುರುತಿಸಿದವನು, ಅಜ್ಞಾನಿ ಶರೀರದಲ್ಲಿನ ಜೀವಾತ್ಮ ನಾನೇ ದೇವರು ಎಂದುಕೊಳ್ಳುವ ಭಾವವಿರುವಾಗ ಅವನು ಮಾಯೆ ಪ್ರಭಾವದಲ್ಲಿ ತುಂಬಿದ್ದಾನೆಂದು ತಿಳಿದು, ಮಾಯೆ ಪ್ರಭಾವದಲ್ಲಿ ಮುಳಿಗಿರುವವನ ಶರೀರದಲ್ಲಿ ದೇವರು ಯಾವ ಲೆಕ್ಕದಲ್ಲಿ ಇದ್ದಾನೋ, ಯಾವ ಸಂಖ್ಯೆಯಲ್ಲಿ ಇದ್ದಾನೋ ತಿಳಿಯುವುದು. ಅಜ್ಞಾನಿ, ದೇವರು ನಾನು ಸಮಾನವೇ ಎನ್ನುವ ಲೆಕ್ಕದಲ್ಲಿ ಇದ್ದಾನೆ. ಆದ್ದರಿಂದ ಅವನ ಲೆಕ್ಕ ಪ್ರಕಾರ ದೇವರು, ಅವನು (ಜೀವಾತ್ಮ) ಸಮಾನವೇ. ಅಂತಹದರಲ್ಲಿ ಜ್ಞಾನಿಗೆ ತಿಳಿಯುವುದೇನೆಂದರೆ! ಮಾಯೆ ಅವನನ್ನು

ಮುಚ್ಚಿಕೊಂಡಿದೆ, ಆದ್ದರಿಂದ ಅವನಲ್ಲಿ ಮಾಯೆಯೇ ಕಾಣಿಸುತ್ತಿದೆ. ಅಂತಹ ಮಾಯೆ ಮುಚ್ಚಿಕೊಂಡಿರುವವನಲ್ಲಿಯೂ ಸಹಾ ದೇವರಿದ್ದಾನೆ. ಅವನಲ್ಲಿ ಯಾವ ನಿಷ್ಪತ್ತಿಯಲ್ಲಿ ಇದ್ದಾನೆಂದು ನೋಡಿದಾಗ ನೆನಪಲ್ಲಿಟ್ಟುಕೊಳ್ಳಬೇಕಾದ ಮುಖ್ಯವಾದ ಸೂತ್ರ ಒಂದು ಇದೆ. ಅದೇನೆಂದರೆ! ದೇವರಿದ್ದಾನೆನ್ನುವ ದೈವಜ್ಞಾನಿ ಶರೀರದಲ್ಲಿ ದೇವರನ್ನು ಗುರುತಿಸಬೇಕಾದಾಗ ಮೇಲೆ ದೈವದಿಂದ ಲೆಕ್ಕಿಸಬೇಕಾಗಿರುತ್ತದೆ. ಅಂದರೆ ಪರಮಾತ್ಮ, ಆತ್ಮ, ಜೀವಾತ್ಮ ಎನ್ನುವ ವರಸೆ ಕ್ರಮದಲ್ಲಿ ಲೆಕ್ಕಿಸುತ್ತೇವೆ. ದೇವರು ಇಲ್ಲ ನಾನೇ ದೇವರೆಂದುಕೊಳ್ಳುವವನ ಶರೀರದಲ್ಲಿ ಮೂರು ಭಾಗಗಳಾಗಿ ಇರುವ ದೇವರ ಸಂಖ್ಯೆಯನ್ನು ಜೀವಾತ್ಮನಿಂದ ಪ್ರಾರಂಭಿಸಿ ಲೆಕ್ಕಿಸಬೇಕಾಗಿರುತ್ತದೆ. ಅಂದರೆ ಜೀವಾತ್ಮ, ಆತ್ಮ, ಪರಮಾತ್ಮ ಎಂಬ ವರಸೆ ಕ್ರಮವಿರುತ್ತದೆ. ದೇವರ ಕಡೆಯಿಂದ ಪ್ರಾರಂಭವಾಗುವುದು ದೇವರ ಗುರುತಾಗಿ ಹೇಳುವೆವು. ಹಾಗೆಯೇ ಜೀವಾತ್ಮಕಡೆಯಿಂದ ಪ್ರಾರಂಭವಾಗುವ ಸಂಖ್ಯೆಯನ್ನು ಮಾಯೆ ಗುರುತಾಗಿ ಹೇಳಬೇಕಾಗಿದೆ. ದೈವಮಾರ್ಗದಲ್ಲಿರುವ ಜ್ಞಾನಿ ದೇವರ ಜ್ಞಾನವನ್ನೇ ಹೇಳುತ್ತಿರುವನು. ಆದ್ದರಿಂದ ಅವನನ್ನು ದೈವ ಪ್ರತಿನಿಧಿಯಾಗಿ ಲೆಕ್ಕಿಸಬೇಕು. ಹಾಗೆಯೇ ಮಾಯೆಮಾರ್ಗದಲ್ಲಿರುವ ಅಜ್ಞಾನಿ ಮಾಯೆ ಮಾತುಗಳನ್ನೇ ಮಾತನಾಡುತ್ತಿರುವನು. ಆದ್ದರಿಂದ ಅವನನ್ನು ಮಾಯೆ ಪ್ರತಿನಿಧಿಯಾಗಿ ಲೆಕ್ಕಿಸಬೇಕು. ಜ್ಞಾನಿ ದೈವ ಸ್ವಭಾವ ಹೊಂದಿರುವವನೆಂದು, ಅಜ್ಞಾನಿ ಮಾಯೆ ಸ್ವಭಾವ ಹೊಂದಿರುವವನೆಂದು ಹೇಳಬಹುದು. ಆದ್ದರಿಂದ ಒಬ್ಬ ಮನುಷ್ಯನನ್ನು ನೋಡಿದಾಗ ಅವನು ಜ್ಞಾನಿಯಾದರೆ ನಮಗೆ ದೇವರು ನೆನಪಿಗೆ ಬರಬೇಕು. ಒಂದುವೇಳೆ ಅಜ್ಞಾನಿಯಾದರೆ ಮಾಯೆ ನೆನಪಿಗೆ ಬರಬೇಕು. ಈ ವಿಧವಾಗಿ ದೇವರಾಗಲಿ, ಮಾಯೆಯಾಗಲಿ ನೆನಪಿಗೆ ಬರುವುದಕ್ಕೆ ಸುಲಭವಾದ ಉಪಾಯದಿಂದ ಜ್ಞಾನಿಯನ್ನು ನೋಡಿದಾಗ ದೇವರ ಕೋಡನ್ನು, ಅಜ್ಞಾನಿಯನ್ನು ನೋಡಿದಾಗ ಮಾಯೆ ಕೋಡನ್ನು ಜ್ಞಾಪಕ ಮಾಡಿಕೊಳ್ಳಬೇಕು. ಆಗ ಮಾಯೆಗೂ ದೇವರಿಗೂ ವ್ಯತ್ಯಾಸ ತಿಳಿಯುತ್ತಿರುತ್ತದೆ. ಆದ್ದರಿಂದ ಯಾರೂ ಮಾಯೆ ಕಡೆ ಹೋಗದಿರುವರು. ಮೊದಲು ಹೇಳಿದ ಸೂತ್ರದ ಪ್ರಕಾರ ಜ್ಞಾನಿಯನ್ನು ನೋಡಿದಾಗ ಅಜ್ಞಾನಿಯನ್ನು ನೋಡಿದಾಗ ಮೂರು ಆತ್ಮಗಳನ್ನು ವ್ಯತ್ಯಾಸದಿಂದ ಹೇಳಿಕೊಳ್ಳಿರೆಂದಿದ್ದೇವಲ್ಲ!

**ಜ್ಞಾನಿ = ಪರಮಾತ್ಮ, ಆತ್ಮ, ಜೀವಾತ್ಮ --> ದೇವರ ಕೋಡ್ ಅನ್ವಯಿಸುತ್ತದೆ.**

**ಅಜ್ಞಾನಿ = ಜೀವಾತ್ಮ, ಆತ್ಮ, ಪರಮಾತ್ಮ --> ಮಾಯೆ ಕೋಡ್ ಅನ್ವಯಿಸುತ್ತದೆ.**

ಇದರ ಪ್ರಕಾರ ಜ್ಞಾನಿ ದೇವರ ಪಕ್ಷದಲ್ಲಿ ಇದ್ದಾನೆ. ಆದ್ದರಿಂದ ದೇವರ ಕೋಡ್ ಆದ 963ನ್ನು ಗುರುತಿಸಿಕೊಳ್ಳಬಹುದು. ಹಾಗೆ ಅಜ್ಞಾನಿ ಮಾಯೆ ಪಕ್ಷದಲ್ಲಿ ಇದ್ದಾನೆ, ಆದ್ದರಿಂದ ಮಾಯೆ ಕೋಡನ್ನು ಏನೆಂದು ಗುರುತಿಸಿಕೊಳ್ಳ ಬೇಕೆಂದು ಕೆಲವರು ಕೇಳಬಹುದು. ಕೆಲವರು ಪರಮಾತ್ಮದ್ದು 9, ಆತ್ಮದ್ದು 6, ಜೀವಾತ್ಮ 3 ಆದಾಗ ಅದನ್ನೇ ಜೀವಾತ್ಮನದು ಮೊದಲನೆಯದಾಗಿ, ಎರಡನೆಯದು ಆತ್ಮನಾಗಿ, ಮೂರನೆಯದು ಪರಮಾತ್ಮನಾಗಿ ಇಟ್ಟುಕೊಂಡು 369 ಎಂದು ಬರೆದುಕೊಂಡರೆ ಮಾಯೆ ಗುರುತು ಆಗುತ್ತದಲ್ಲ ಎಂದು ಮಾಯೆಕೋಡ್ 3 6 9 ಎಂದುಕೊಳ್ಳಬಹುದು. ದೇವರ ಕೋಡ್ 9 6 3 ಎಂದು ನಾವು ವಿವರವಾಗಿ ಶಾಸ್ತ್ರಬದ್ಧವಾಗಿ ಹೇಳಿಕೊಂಡಿದ್ದೇವೆ. ಆದರೆ ಜ್ಞಾನರೀತ್ಯಾ ಮಾಯಕೋಡ್‌ನ್ನು 3 6 9 ಎನ್ನಬಾರದು. 3 6 9 ಗಣಿತಶಾಸ್ತ್ರಕ್ಕೆ ಸರಿಹೋದರೂ ಎಲ್ಲದಕ್ಕಿಂತ ದೊಡ್ಡ ಶಾಸ್ತ್ರವಾದ ಬ್ರಹ್ಮವಿದ್ಯಾಶಾಸ್ತ್ರಕ್ಕೆ ಸರಿಹೋಗುವುದಿಲ್ಲ. ಅಂಥದರಲ್ಲಿ ದೈವಜ್ಞಾನವನ್ನು ಅನುಸರಿಸಿ ಶಾಸ್ತ್ರಬದ್ಧವಾಗಿ ಮಾಯಕೋಡ್‌ನ್ನು ನೋಡಬೇಕಾಗಿ ಬಂದಾಗ ದೇವರ ಶಾಸ್ತ್ರವಾದ, ಮತ್ತು ಬ್ರಹ್ಮವಿದ್ಯಾಶಾಸ್ತ್ರವಾದ, ಭಗವದ್ಗೀತೆಯಲ್ಲಿನ 16ನೇ ಅಧ್ಯಾಯದಲ್ಲಿ 14ನೇ ಶ್ಲೋಕವನ್ನು ಗಮನಿಸೋಣ.

***16. ಶ್ಲೋ॥ 14 : ಅಸೌ ಮಯಾಹತ ಶ್ಯತ್ರುಃ ಹನಿಷ್ಯೇ ಚಾಪರಾನಪಿ।***
***ಈಶ್ವರೋ ಹಮಹಂ ಭೋಗೀ ಸಿದ್ಧೋಹಂ ಬಲವಾನ್ ಸುಖೀ॥***

ಈ ಶ್ಲೋಕದಲ್ಲಿನ ಎರಡನೇ ವಾಕ್ಯವನ್ನು ಮೂರು ಭಾಗಗಳಾಗಿ ವಿಭಜಿಸಬಹುದು. ಒಂದು ಈಶ್ವರೋಹಂ, ಎರಡು ಸಿದ್ಧೋಹಂ, ಅಹಂ ಬಲವಾನ್, ಮೂರು ಭೋಗೀ, ಸುಖೀ. ಇದರ ಅರ್ಥ **“ಒಂದು ನಾನೇ ದೇವರು, ಎರಡು ನಾನೇ ಬಲವಂತನು, ಮೂರು ನಾನೇ ಭೋಗಗಳನ್ನು**

**ಅನುಭವಿಸುತ್ತಾ ಸುಖವನ್ನು ಹೊಂದುತ್ತಿದ್ದೇನೆ"** ಈ ಮಾತುಗಳನ್ನು ಮಾಯೆ ಪ್ರಭಾವದಲ್ಲಿ ಇರುವ ಮನುಷ್ಯ, ದೈವಜ್ಞಾನ ತಿಳಿಯದ ಮನುಷ್ಯ ಅಂದುಕೊಳ್ಳುತ್ತಿರುವನು. ನಾನು ಎಂದು ಅಂದುಕೊಳ್ಳುವ ಜೀವಿಯು ಶರೀರದಲ್ಲಿ ನಿಜವಾಗಿ ಮೂರು ಅರ್ಹತೆಗಳು ಹೊಂದಿದ್ದಾನಾ? ಜೀವಿಯೇ ದೇವರಾ? ಜೀವಿಗೇ ಸ್ವತಃವಾಗಿ ಬಲವಿದೆಯಾ? ಜೀವಿಯು ಸುಖಗಳನ್ನು ಹೊಂದುತ್ತಿದ್ದಾನಾ? ಎಂದು ಯೋಚಿಸಿದರೆ ವಾಸ್ತವ ಈ ವಿಧವಾಗಿ ಇದೆ. ಈ ಮೂರು ಮಾತುಗಳಲ್ಲಿ ಮೊದಲು ಎರಡು ಮಾತುಗಳು ನಾನು ದೇವರು, ನಾನು ಬಲವಂತನು ಎನ್ನುವುದು ಪೂರ್ತಿ ಅಸತ್ಯ. ಕೊನೆಯ ಮಾತಾದ ನಾನು ಭೋಗಿ, ಸುಖೀ ಎನ್ನುವ ಮಾತು ಮಾತ್ರ ಸತ್ಯ. ಇಲ್ಲಿ ಜೀವಾತ್ಮ ಎಂದುಕೊಳ್ಳುವ ಎರಡು ಮಾತುಗಳು ಪೂರ್ತಿ ಅಸತ್ಯವಾದಾಗ, ಜೀವಾತ್ಮ ಎಂದುಕೊಂಡಹಾಗೆ ಆತನು ದೇವರಲ್ಲ, ಬಲವಂತನೂ ಅಲ್ಲವೆಂದು ತಿಳಿಯುತ್ತಿದೆ. ಇದನ್ನನುಸರಿಸಿ ಮಾನವನ ಶರೀರದಲ್ಲಿ ದೇವರು ಬೇರೆ ಜೀವಾತ್ಮ ಬೇರೆಯೆಂದು, ಹಾಗೆ ಬಲವಂತನು ಬೇರೆ, ಜೀವಿ ಬೆರೆಯೆಂದು ತಿಳಿಯುತ್ತಿದೆ. ನಾನೇ ದೇವರು, ನಾನೇ ಬಲವಂತನು ಎನ್ನುವ ಮಾತುಗಳು ಅಸತ್ಯವೆನ್ನುವುದಕ್ಕೆ ಎಷ್ಟೋ ಶಾಸ್ತ್ರಬದ್ಧವಾದ ಆಧಾರವಿದೆ. ಅದೇನೆಂದರೆ!

ನಮಗೆ ತಿಳಿದರೂ ತಿಳಿಯದಿದ್ದರೂ ನಮ್ಮ ಶರೀರದಲ್ಲಿ ಮೂರು ಆತ್ಮಗಳಿವೆ. ಇದು ಒಂದು ಮಾನವ ಶರೀರದಲ್ಲೇ ಅಲ್ಲದೆ ಸಮಸ್ತ ಜೀವರಾಶಿಗಳ ಶರೀರಗಳಲ್ಲಿಯೂ ಮೂರು ಆತ್ಮಗಳಿವೆ. ಇವುಗಳನ್ನೇ ಜ್ಞಾನ ತಿಳಿದವನ ದೃಷ್ಠಿಯಲ್ಲಿ 9 6 3 ಗುರುತಾಗಿ ಗುರುತಿಸಿದ್ದೇವೆ. ಇವನ್ನೇ ಪರಮಾತ್ಮಯೆಂದು, ಆತ್ಮಯೆಂದು, ಜೀವಾತ್ಮಯೆಂದು ಸಹ ಹೇಳಿಕೊಂಡಿದ್ದೇವೆ. ಪರಮಾತ್ಮ ಲೋಕತ್ರಯವೆಲ್ಲಾ ವ್ಯಾಪಿಸಿದ್ದು, ಎಲ್ಲವನ್ನೂ ಭರಿಸುವವನಾಗಿದ್ದು, ಎಲ್ಲರಿಗೂ ಈಶ್ವರನು (ಅಧಿಪತಿ) ಆಗಿದ್ದಾನೆಂದು ಪುರುಷೋತ್ತಮ ಪ್ರಾಪ್ತಿಯೋಗ 17ನೇ ಶ್ಲೋಕದಲ್ಲಿ ಎರಡನೇ ವಾಕ್ಯದಲ್ಲಿ *"ಯೋಲೋಕತ್ರಯ ಮಾವಿಶ್ಯ ಬಿಭರ್ತವ್ಯಯ ಈಶ್ವರಂ"* ಎಂದು ಇದೆ. ಪರಮಾತ್ಮ ಎಲ್ಲರಿಗೂ ದೇವರಾಗಿದ್ದೂ, ಎಲ್ಲರ

ಶರೀರಗಳೊಳಗೂ ಹೊರಗೂ ಅಣುಅಣುವಿನಲ್ಲೂ ವ್ಯಾಪಿಸಿದ್ದು, ಎಲ್ಲರನ್ನು ಭರಿಸುತ್ತಿದ್ದಾನೆಂದು ಭಗವಂತನಿಂದ ಹೇಳಲಾಗಿದೆ. ಇದನ್ನನುಸರಿಸಿ ನಮ್ಮ ಶರೀರದೊಳಗೂ ಮತ್ತು ಹೊರಗೂ ಪ್ರತಿ ಅಣುವಿನಲ್ಲೂ ದೇವರಿದ್ದಾನೆಂದು ತಿಳಿಯುತ್ತದೆ. ಅದು ಪರಮಾತ್ಮ ವಿಧಾನವಾದಾಗ ಇನ್ನು ಎರಡನೆ ಆತ್ಮ ಶರೀರವೆಲ್ಲಾ ವ್ಯಾಪಿಸಿದೆ. ಆತ್ಮ ಶರೀರದ ಒಳಗೆ ಮಾತ್ರವೇ ಉಗುರು, ಕೂದಲ ಕೊನೆವರೆಗೂ ವ್ಯಾಪಿಸಿದೆ. ಶರೀರದ ಹೊರಗೆ ಸ್ವಲ್ಪವೂ ಸಹ ಆತ್ಮ ಇಲ್ಲ. ಹಾಗೇ ಶರೀರದಲ್ಲಿ ಆತ್ಮ ವ್ಯಾಪಿಸದ ಸ್ಥಳವೂ ಸಹ ಇಲ್ಲ. ಇನ್ನು ಮೂರನೆಯದಾದ ಜೀವಾತ್ಮ ವಿಷಯಕ್ಕೆ ಬಂದರೆ ಶರೀರದಲ್ಲಿನ ತಲೆಯ ಭಾಗದಲ್ಲಿ, ಹಣೆಯಭಾಗಕ್ಕೆ ಸಮಾನದಲ್ಲಿ, ತಲೆ ಮಧ್ಯೆಭಾಗದಲ್ಲಿ ಕಣ್ಣಿಗೆ ಕಾಣಿಸದ ನಾಲ್ಕು ಚಕ್ರಗಳಾದ ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳಲ್ಲಿ, ಕೆಳಗಿರುವ ಗುಣಚಕ್ರದಲ್ಲಿ, ಆ ಗುಣಚಕ್ರದಲ್ಲಿನ ಮೂರು ಭಾಗಗಳಲ್ಲಿ ಯಾವುದೋ ಒಂದು ಭಾಗದಲ್ಲಿ ಹಿಟ್ಟಿನರವೆಯುಲ್ಲಿ ಒಂದು ಕಣದಷ್ಟು ಪರಿಮಾಣದಲ್ಲಿ ಜೀವಾತ್ಮ ನಿವಾಸವಿರುತ್ತಿದ್ದಾನೆ. ಇದನ್ನನುಸರಿಸಿ ಜೀವಾತ್ಮ ಶರೀರದಲ್ಲಿ ಒಂದು ಕಡೆ ರವೆಯಷ್ಟು ಜಾಗದಲ್ಲಿ ಮಾತ್ರವಿದೆಯೆಂದು, ತಲೆಯಲ್ಲಿನ ಗುಣಚಕ್ರದಲ್ಲಿ ಹೊರತು ಶರೀರದಲ್ಲಿ ಮತ್ತೆಲ್ಲೂ ಇಲ್ಲವೆಂದು ತಿಳಿಯುತ್ತಿದೆ. ಇಲ್ಲಿಯವರೆಗು ಮೂರು ಆತ್ಮಗಳ ನಿವಾಸ ತಿಳಿದುಕೊಂಡಿದ್ದೇವಲ್ಲವೆ! ಅದೇ ವಿಧವಾಗಿ ಮೂರು ಆತ್ಮಗಳ ಕಾರ್ಯಗಳನ್ನೂ ಸಹ ತಿಳಿದುಕೊಳ್ಳೋಣ.

ಪರಮಾತ್ಮ ಅಥವಾ ದೇವರು ಎನ್ನುವವನು ವಿಶ್ವವೆಲ್ಲಾ ಅಣು ಅಣುವಿನಲ್ಲೂ ವ್ಯಾಪಿಸಿದವನಾಗಿ, ಎಲ್ಲದಕ್ಕೂ ಅಧಿಪತಿಯಾಗಿದ್ದು ತಾನು ಯಾವ ಕಾರ್ಯವನ್ನೂ ಮಾಡದೆ ಮೌನವಾಗಿ ಇದ್ದಾನೆ. ಯಜಮಾನ ತನ್ನ ಸೇವಕರಿಂದಲೇ ಕೆಲಸ ಮಾಡಿಸುತ್ತಾ ತಾನು ಮಾಡದೆ ಅಧಿಕಾರಿಯಾಗಿ ಇರುವಹಾಗೇ ದೇವರೂ ಸಹ ತಾನು ತಯಾರು ಮಾಡಿದ ಆತ್ಮನಿಂದ ಎಲ್ಲಾ ಕಾರ್ಯಗಳನ್ನು ಮಾಡಿಸುತ್ತಾ ಜೀವಾತ್ಮನನ್ನು ಕೇವಲ ಅನುಭವಗಳನ್ನು ಹೊಂದುವಹಾಗೇ ನಿಯಮಿಸಿದ್ದಾನೆ. ಶರೀರದೊಳಗೂ ಶರೀರದ ಹೊರಗೂ

ವ್ಯಾಪಿಸಿದ ಪರಮಾತ್ಮ ಯಾವ ಕಾರ್ಯಗಳನ್ನು ಮಾಡದೆ ಸ್ತಬ್ಧತೆಯಾಗಿ ಇದ್ದಾನೆ. ಆತ್ಮ ಶರೀರದಲ್ಲಿನ ಎಲ್ಲಾ ಕಾರ್ಯಗಳನ್ನು ಮಾಡುತ್ತಿದೆ. ಶರೀರದೊಳಗೆ ನಡೆಯುವ ಕಾರ್ಯಗಳೇ ಅಲ್ಲದೇ ಹೊರಗಿನ ಕಾರ್ಯಗಳಾಗಲೀ, ಜೀವಿಗೆ ತಿಳಿಯದೇನೇ ಶರೀರದೊಳಗೆ ನಡೆಯುವ ಕಾರ್ಯಗಳಾಗಲೀ ಆತ್ಮ ಪ್ರತಿ ಕ್ಷಣವೂ ಮಾಡುತ್ತಿದೆ. ಜೀವಾತ್ಮನು ಹುಟ್ಟಿದಾಗಿನಿಂದ ಸಾಯುವವರೆಗು ಏಕಧಾಟಿಯಾಗಿ, ಯಾವ ಸ್ವಲ್ಪವೂ ವಿಶ್ರಾಂತಿ ಇಲ್ಲದೇ ಕೆಲಸ ಮಾಡುವುದು ಜಗತ್ತಿನಲ್ಲಿ ಆತ್ಮ ಒಂದೇ ಎಂದು ಹೇಳಬಹುದು. ಇನ್ನು ಜೀವಾತ್ಮ ವಿಷಯಕ್ಕೆ ಬಂದರೆ, ಜೀವಾತ್ಮ ಕೂಡ ಯಾವ ಕೆಲಸ ಮಾಡುವವನಲ್ಲ. ಆದರೆ ಜೀವಾತ್ಮ ಆತ್ಮ ಮಾಡಿದ ಹೊರಗಿನ ಕೆಲಸಗಳಲ್ಲಿನ ಕಷ್ಟಸುಖ ಅನುಭವಗಳನ್ನು ಅನುಭವಿಸುತ್ತಾ ಇರುತ್ತದೆ. ಒಂದು ನಿದ್ರಾವಸ್ಥೆಯಲ್ಲಿ ಬಿಟ್ಟರೆ ಉಳಿದ ಜಾಗ್ರತೆ, ಸ್ವಪ್ನ ಅವಸ್ಥೆಗಳಲ್ಲಿ ಜೀವಿಯು ಬಾಧೆಯನ್ನು ಸಂತೋಷವನ್ನು ಅನುಭವಿಸುತ್ತಲೇ ಇರುತ್ತಾನೆ. ಇಲ್ಲಿ ಕೆಲವರಿಗೊಂದು ಅನುಮಾನ ಬಂದು ಈ ವಿಧವಾಗಿ ಪ್ರಶ್ನಿಸಬಹುದು. “ಜೀವಾತ್ಮ ದೃಶ್ಯಗಳನ್ನು ನೋಡುತ್ತಿದ್ದಾನೆ, ಶಬ್ದಗಳನ್ನು ಕೇಳುತ್ತಿದ್ದಾನೆ. ಆ ಸಂದರ್ಭಕ್ಕೆ ತಕ್ಕಂತೆ ಕೆಲಸವನ್ನು ಮಾಡುತ್ತಿದ್ದಾನಲ್ಲ! ಅಂತಹದರಲ್ಲಿ ಜೀವಾತ್ಮ ಯಾವ ಕೆಲಸ ಮಾಡುತ್ತಿಲ್ಲ ಎನ್ನುವುದೇನು?” ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನವೇನೆಂದರೆ!

ನಮ್ಮ ಶರೀರದಲ್ಲಿ ಯಾವಾಗಲೂ ಎಷ್ಟೋ ಕೆಲಸಗಳು ನಡೆಯುತ್ತಿವೆ. ಎಲ್ಲವನ್ನೂ ಆತ್ಮ ಶರೀರದಿಂದ ಮಾಡಿಸುತ್ತಲೇ ಇದೆ. ಶರೀರದಲ್ಲಿ ಎಷ್ಟೋ ಅವಯವಗಳು ಇವೆ. ಕೆಲವು ಅವಯವಗಳು ಶರೀರದ ಒಳಗೂ, ಕೆಲವು ಅವಯವಗಳು ಶರೀರದ ಹೊರಗೂ ಇವೆ. ಶರೀರದ ಒಳಗೆ ಇರುವ ಅವಯವ ಗಳಾಗಲಿ, ಶರೀರದ ಹೊರಗಿರುವ ಅವಯವಗಳಾಗಲಿ ಅತ್ಮವೇ ಸ್ವತಃ ತನ್ನ ಶಕ್ತಿಯಿಂದ ಕೆಲಸ ಮಾಡಿಸುತ್ತಿದೆ. ಆತ್ಮ ಮಾಡಿಸುತ್ತಿರುವಾಗ ಎಲ್ಲಾ ಅವಯವಗಳು ಅವು ಅವುಗಳ ಕೆಲಸಗಳನ್ನು ಮಾಡುತ್ತಿವೆ. ಶರೀರದ ಒಳಗೂ ಹೊರಗೂ ಅನೇಕ ಅವಯವಗಳು ಎಲ್ಲಾ ವಿವಿಧ ರೀತಿಯ ಕೆಲಸಗಳನ್ನು ಮಾಡುತ್ತಿವೆ.

ಶರೀರದ ಒಳಗೆ ಗುಂಡಿಗೆ ಕದಲುತ್ತಾ ರಕ್ತವನ್ನು ಪ್ರವಹಿಸುವಹಾಗೆ ಮಾಡುತ್ತಿದೆ. ಅದು ಗುಂಡಿಗೆ ವೊಂದರ ನಿರ್ಧಿಷ್ಟವಾದ ಕೆಲಸ. ಅದೇ ವಿಧವಾಗಿ ಶ್ವಾಶಕೋಶಗಳು ಕದಲುತ್ತಾ ಗಾಳಿಯನ್ನು ಪ್ರವಹಿಸುವಹಾಗೆ ಮಾಡುತ್ತಿವೆ. ಅದು ಶ್ವಾಶಕೋಶಗಳೊಂದರ ನಿರ್ಧಿಷ್ಟವಾದ ಕೆಲಸ. ಯಾವ ಅವಯವ ಕೆಲಸಮಾಡಿದರೂ ಅದು ಆತ್ಮ ಚೈತನ್ಯದಿಂದಲೇ ಕೆಲಸ ಮಾಡುತ್ತಿದೆ. ಆತ್ಮ ಶರೀರವೆಲ್ಲಾ ವ್ಯಾಪಿಸಿ ಪ್ರತಿ ಅಣುವಿನಲ್ಲಿನ ಧಾತುಗಳನ್ನು ಕೆಲಸ ಮಾಡಿಸುತ್ತಾ ಶರೀರ ಅವಯವಗಳೆಲ್ಲವುಗಳಿಗೂ ಶಕ್ತಿಯನ್ನು ಕೊಡುತ್ತಿದೆ. ಶರೀರದಿಂದ ಹೊರಗೆ ನಡೆಯುವ ಕೇವಲ ಐದು ಜ್ಞಾನೇಂದ್ರಿಯಗಳ ಕೆಲಸಗಳು, ಐದು ಕರ್ಮೇಂದ್ರಿಯಗಳ ಕೆಲಸಗಳು ಜೀವಾತ್ಮನಿಗೆ ತಿಳಿಯುತ್ತಿವೆ. ಹಾಗೆ ಶರೀರದ ಒಳಗೆ ಮನಸ್ಸು, ಬುದ್ಧಿ, ಚಿತ್ತ ಮಾಡುವ ಕೆಲಸಗಳನ್ನು ಸಹ ತಿಳಿಯುತ್ತಿವೆ. ಜೀವಾತ್ಮ ಶರೀರ ಬಾಹ್ಯೇಂದ್ರಿಯಗಳ ಕೆಲಸವನ್ನು ತಾನು ಮಾಡದಿದ್ದರೂ, ಹಾಗೆ ಶರೀರದೊಳಗೆ ಅಂತರೇಂದ್ರಿಯಗಳಾದ ಮನೋ, ಬುದ್ಧಿ, ಚಿತ್ತಗಳ ಕೆಲಸವನ್ನು ತಾನು ಮಾಡದಿದ್ದರೂ, ಅವು ತನಗೆ ತಿಳಿದು ನಡೆಯುತ್ತಿರುವುದರಿಂದ ಆ ಕೆಲಸಗಳನ್ನು ತಾನೇ ಮಾಡಿದಹಾಗೆ, ಮಾಡುತ್ತಿರುವಹಾಗೆ, ಮಾಡಬೇಕಾಗಿರುವಹಾಗೆ ಭ್ರಮಿಸುತ್ತಿದ್ದಾನೆ. ತನ್ನ ನಿಜಸ್ವರೂಪ ತಿಳಿಯದ ಜೀವಾತ್ಮ, ತನಗೆ ಯಾವ ಶಕ್ತಿಯೂ ಇಲ್ಲವೆಂದು ತಿಳಿಯದ ಜೀವಾತ್ಮ ಅವಯವಗಳ ಕೆಲಸಗಳಾಗಲಿ, ಬುದ್ಧಿಯೋಚನೆಗಳಾಗಲಿ, ಚಿತ್ತ ಮಾಡುವ ನಿರ್ಣಯಗಳಾಗಲಿ ತಾನೇ ಮಾಡುತ್ತಿರುವ ಹಾಗೆ ಭ್ರಮೆಯಲ್ಲಿದ್ದಾನೆ. ಅಂಥವನನ್ನೇ ಅಜ್ಞಾನ ದಿಶೆಯಲ್ಲಿರುವ ಜೀವಾತ್ಮ ಎನ್ನುತ್ತೇವೆ. ಅವನನ್ನೇ **"ಮಾಯೆಮನುಷ್ಯ"** ಎನ್ನುತ್ತೇವೆ.

ಶರೀರದಲ್ಲಿ ಒಂದುಕಡೆ ರವೆಯಷ್ಟುಯಿರುವವನು, ಕೇವಲ ಕಷ್ಟ ಸುಖಗಳನ್ನು ಅನುಭವಿಸುವವನು, ಯಾವ ಕೆಲಸ ಮಾಡದವನು, ಯಾವ ಶಕ್ತಿ ಇಲ್ಲದವನು, ಕಣ್ಣು, ಕಿವಿ ಬುದ್ಧಿಗೆ ಕಳುಹಿಸಿದ ಸಮಾಚಾರವನ್ನು ಪಕ್ಕದಿಂದ ತಿಳಿದುಕೊಂಡವನು, ಅಜ್ಞಾನದಲ್ಲಿದ್ದು ಮಾಯಾ ಪ್ರಭಾವದಿಂದ ಅಹಂನ್ನು

ಹೊಂದಿ ತಾನು ಮಾಡದ ಕೆಲಸಗಳನ್ನು ತಾನೇ ಮಾಡಿದಹಾಗೆ ಜೀವಾತ್ಮ ಅಂದುಕೊಳ್ಳುತ್ತಿದ್ದಾನೆ. ಆ ವಿಧವಾಗಿ ಅಂದುಕೊಳ್ಳುವುದರಿಂದ ಜೀವಾತ್ಮನಿಗೆ ತನಗಿಂತಲೂ ದೊಡ್ಡದಾದ ಆತ್ಮ ಶರೀರವೆಲ್ಲಾ ತುಂಬಿ ಚೈತನ್ಯ ಶಕ್ತಿಯಾಗಿದೆ ಯೆಂದು ತಿಳಿದಿಲ್ಲ. ತನಗಿಂತ ದೊಡ್ಡದಾದ ಆತ್ಮ ಶರೀರದಲ್ಲಿ ಪ್ರತ್ಯಕ್ಷವಾಗಿ ಶಕ್ತಿಯಾಗಿದ್ದರೂ ತಿಳಿಯದ ಜೀವಾತ್ಮ ಶರೀರದಲ್ಲೇ ಮಾತನಾಡುವುದು ಇಲ್ಲದೆ ಸ್ಥಬ್ದತೆಯಾಗಿರುವ ಪರಮಾತ್ಮನನ್ನು ಒಪ್ಪಿಕೊಳ್ಳುತ್ತಾನಾ? ಒಪ್ಪಿಕೊಳ್ಳುವುದಿಲ್ಲವೆಂದೇ ಹೇಳಬಹುದು. ಆದ್ದರಿಂದ ಕೆಲವು ಕಡೆ ಕೆಲವರು ದೇವರು ಇಲ್ಲವೆಂದೂ, ಮಾನವನ ಅಭೂತಕಲ್ಪನೆಯೇ ದೇವರೆಂದು, ಎಲ್ಲಾ ತಾನೇ ಮಾಡುತ್ತಾ ದೇವರ ಹೆಸರು ಹೇಳುವುದೇನೆಂದು, ಯಾವ ಯಂತ್ರವನ್ನಾದರೂ ಮಾನವನೇ ಕಂಡುಹಿಡಿದಿದ್ದಾನಾಗಲೀ ದೇವರು ತಂದುಕೊಟ್ಟಿಲ್ಲವೆಂದು, ದೇವರಿದ್ದಾನೆನ್ನುವವರದು ಒಂದು ವಿಧವಾದ ರೋಗವೆಂದು ಅನ್ನುವುದು ನೋಡುತ್ತಲೇ ಇದ್ದೇವೆ. ಅಂತಹವರೊಂದಿಗೆ ಎಷ್ಟು ವಾದಿಸಿದರೂ ಅವರು ಕೇಳದೇ ಹೋಗುವುದಲ್ಲದೆ ಪ್ರಪಂಚದಲ್ಲಿ ಮನುಷ್ಯನಿಗಿಂತಲೂ ಮೀರಿದ ದೇವರು ಇಲ್ಲವೆಂದು ಹೇಳುತ್ತಿರುವರು. ಅಂಥವರನ್ನು ಮಾಯೆಪಕ್ಷದವರೆಂದು, ಪೂರ್ತಿ ಅಜ್ಞಾನಿಗಳೆಂದು ಹೇಳಬಹುದು.

ದೈವಜ್ಞಾನ ಹೊಂದಿದ ಮನುಷ್ಯನಲ್ಲಾಗಲಿ, ಮಾಯೆಯಲ್ಲಿ ಮುಳುಗಿರುವ ಮನುಷ್ಯನಲ್ಲಾಗಲಿ, ಎಷ್ಟೋ ಉತ್ತಮವಾದ ಜ್ಞಾನವಿರುವ ಮಹರ್ಷಿಯಲ್ಲಾಗಲಿ, ಯಾವ ಜ್ಞಾನವಿಲ್ಲದ ಬೇವರ್ಷಿಯಲ್ಲಾಗಲೀ ದೇವರು ಮೂರು ಆತ್ಮಗಳಾಗಿಯೇ ಇದ್ದಾನೆ. ಇದಕ್ಕೂ ಮೊದಲು ಜ್ಞಾನಿ ಶರೀರದಲ್ಲಿ ದೇವರನ್ನು 9 6 3 ಎಂದು ಗುರುತಿಸಬಹುದೆಂದು ಹೇಳಿಕೊಂಡಿದ್ದೇವೆ. ಅಜ್ಞಾನಿ ಶರೀರದಲ್ಲಿ ದೇವರನ್ನು ಜೀವಿಯ ಕಡೆಯಿಂದ ಮಾಯೆಯನ್ನು ಮಾತ್ರವೇ ಲೆಕ್ಕಿಸಬೇಕೆಂದು ಸಹ ಅಂದುಕೊಂಡಿದ್ದೇವೆ. ಹಾಗೆ ಲೆಕ್ಕಿಸಿದರೆ 3 6 9 ಅಂದುಕೊಳ್ಳುವುದು ಸಹ ತಪ್ಪೆಂದು ಅಂದುಕೊಂಡಿದ್ದೇವೆ. ಏಕೆ ಮಾಯೆ ಸಂಖ್ಯೆ 3 6 9 ಅಲ್ಲವೋ, ಮಾಯೆಗೆ ಜ್ಞಾನದ ಪ್ರಕಾರ ಯಾವ ಸಂಖ್ಯೆಯನ್ನು ಗುರುತಿಸಿಕೊಳ್ಳಬಹುದೋ ವಿವರಿಸಿಕೊಂಡು ನೋಡಿದರೇ ಈ ವಿಧವಾಗಿ ಅರ್ಥವಾಗಬಲ್ಲದು.

ಈಗ ಭಗವದ್ಗೀತೆ 16ನೇ ಅಧ್ಯಾಯದಲ್ಲಿನ 14ನೇ ಶ್ಲೋಕವೊಂದರ ಎರಡನೇ ವಾಕ್ಯವನ್ನು ನೋಡಿದರೆ ಮೂರು ಭಾಗಗಳಾಗಿ ಇದೆಯೆಂದು ಮೊದಲೇ ಹೇಳಿಕೊಂಡಿದ್ದೇವೆ. ಅದರಲ್ಲಿ ಒಂದು **"ಈಶ್ವರೋಹಮ್"** ಎಂದು ಇದೆ. ಇದರ ಅರ್ಥ **"ನಾನೇ ದೇವರು"** ಮಾಯೆಮಾರ್ಗದಲ್ಲಿರುವವನು ನಾನೇ ದೇವರು ಎಂದು ಅಂದುಕೊಳ್ಳುತ್ತಿದ್ದರೂ ಅವನಲ್ಲಿಯೂ ಸಹ ದೇವರು, ಆತ್ಮ ಇದ್ದಾರೆ. ಇಲ್ಲಿ ಜೀವಾತ್ಮ ಭಾವದಲ್ಲಿ ನಾನು ದೇವರಷ್ಟವನೇ ಎನ್ನುವ ಭಾವವೇ ತಾನೆ ಇರುವುದು. ಆದ್ದರಿಂದ ಅವನ ಭಾವದ ಪ್ರಕಾರ ಅವನ ಶರೀರದಲ್ಲಿ ದೇವರನ್ನು ಜೀವಾತ್ಮನನ್ನು ಸಮಾನವಾಗಿ ಲೆಕ್ಕಿಸಬೇಕಾಗಿರುತ್ತದೆ. ಆಗ ದೇವರ ಅಂಕೆಯನ್ನು ಆರಾಗಿ ಬದಲಾಯಿಸಬೇಕಾಗಿದೆ. ಜೀವಿಯ ಅಂಕೆಯನ್ನು ಸಹ ದೇವರ ಅಂಕೆಯೊಂದಿಗೆ ಸಮಾನವಾಗಿ ಆರಾಗೇ ಬದಲಾಯಿಸಬೇಕು. ಜ್ಞಾನ ತಿಳಿದಿರುವ ಜ್ಞಾನಿಕಡೆಯಿಂದ ನೋಡಿದಾಗ ದೇವರ ಅಂಕೆ ಒಂಬತ್ತು, ಜೀವಾತ್ಮ ಅಂಕೆ ಮೂರು. ದೇವರ ಅಂಕೆಯನ್ನು ಜೀವಾತ್ಮ ಅಂಕೆಯನ್ನು ಸೇರಿಸಿದರೆ 9+3=12 ಬರುತ್ತದೆ. ಈಗ ಅಜ್ಞಾನವಿರುವ ಮಾಯೆ ಮನುಷ್ಯನ ಕಡೆಯಿಂದ ನೋಡಿದರೆ ದೇವರ ಅಂಕೆ ಆರು ಜೀವಾತ್ಮ ಅಂಕೆ ಸಹ ಆರೇ. ದೇವರ ಅಂಕೆಯನ್ನು ಜೀವಾತ್ಮ ಅಂಕೆಯನ್ನು ಸೇರಿಸಿದರೆ ಒಟ್ಟು 6+6=12 ಆಗುತ್ತದೆ. ಮಧ್ಯದಲ್ಲಿ ಆತ್ಮ ಯಾರಿಗೂ ತಿಳಿಯದೆ ಇರುವುದರಿಂದ ಅದರ ಅಂಕೆ ಕೆಡದೆ ಹಾಗೇ ಆರಾಗಿಯೇ ಇರುತ್ತದೆ. ಆದ್ದರಿಂದ ಜ್ಞಾನಿಕಡೆಯಿಂದ ನೋಡಿದಾಗ 9 6 3 ಇರುವ ದೇವರ ಸಂಖ್ಯೆ ಅಜ್ಞಾನಿಕಡೆಯಿಂದ ನೋಡಿದಾಗ ಮಾಯೆ ಸಂಖ್ಯೆಯಾಗಿ ಬದಲಾಗಿ 666 ಎಂದು ಇದೆ. ಇದನ್ನನುಸರಿಸಿ

**ದೇವರ ಸಂಖ್ಯೆ 963 ಇವುಗಳನ್ನು ಏಕಸಂಖ್ಯೆಯಾಗಿ ಬದಲಾಯಿಸಿದರೆ 9+6+3=18, 1+8=9**
**ಮಾಯೆ ಸಂಖ್ಯೆ 666 ಇವುಗಳನ್ನು ಏಕಸಂಖ್ಯೆಯಾಗಿ ಬದಲಾಯಿಸಿದರೆ 6+6+6=18, 1+8=9**

ಜ್ಞಾನಿಯಲ್ಲಾಗಲಿ, ಅಜ್ಞಾನಿಯಲ್ಲಾಗಲಿ ದೇವರಿದ್ದಾನೆನ್ನುವುದಕ್ಕೆ ಆಧಾರವಾಗಿ ಕೊನೆಗೆ ಪರಮಾತ್ಮ ಅಂಕೆ ಒಂಬತ್ತೇ ಬರುತ್ತಿದೆ. ಅಜ್ಞಾನಿ ಶರೀರದಲ್ಲಿ ಅವನ ಭಾವವನ್ನು ಅನುಸರಿಸಿ ಜೀವಾತ್ಮ ದೇವರಂತವನೆಂದು ತಿಳಿಯುವಹಾಗೆ

ದೇವರ ಅಂಕೆ ಆರು, ಜೀವಿಯ ಅಂಕೆ ಆರಾಗಿ ಇದೆಯೆಂದು ಗ್ರಹಿಸಬೇಕು. ಭಗವದ್ಗೀತೆ 16ನೇ ಅಧ್ಯಾಯ 14ನೇ ಶ್ಲೋಕದಲ್ಲಿನ ಎರಡನೇ ವಾಕ್ಯದಲ್ಲಿ, ಎರಡನೇ ಭಾಗದಲ್ಲಿ **"ಅಹಂ ಬಲವಾನ್"** ಎಂದು ಇದೆ. ಇದರ ಅರ್ಥ **"ಶರೀರದಲ್ಲಿ ಬಲ ನಾನೇ"** ಈ ಮಾತನ್ನು ಜೀವಾತ್ಮ ಅಂದುಕೊಳ್ಳುವುದು ತಪ್ಪಾ ಒಪ್ಪಾ ಎಂದು ಪರಿಶೀಲಿಸಿ ನೋಡೋಣ. ಶರೀರದಲ್ಲಿ ಒಂದು ವಸ್ತುವನ್ನು ಎತ್ತುವುದಕ್ಕಾಗಲಿ, ಒಂದು ಕೆಲಸವನ್ನು ಮಾಡುವುದಕ್ಕಾಗಲಿ ಬಲ ಅವಶ್ಯಕ. ಕಾರ್ಯಕ್ಕೆ ಬೇಕಾದ ಬಲವನ್ನು ಸಹಜವಾಗಿ ಆತ್ಮ ತನ್ನ ನಾಡೀಕೇಂದ್ರಗಳಿಂದ ಶರೀರಕ್ಕೆ ಕೊಡುತ್ತಿದೆ. ವಿವರವಾಗಿ ಹೇಳಿಕೊಂಡರೆ ಆತ್ಮ ತನ್ನ ಶಕ್ತಿಯಿಂದ ಶರೀರವನ್ನು ನಡೆಸುತ್ತಾ ಎಲ್ಲಾ ಕಾರ್ಯಗಳನ್ನು ಮಾಡುತ್ತಿದೆ. ಬಲವಂತನ ಶರೀರದಲ್ಲಿರುವ ಹೆಚ್ಚಿನ ಬಲವಾಗಲಿ, ಬಲಹೀನನ ಶರೀರದಲ್ಲಿ ಇರುವ ಕಡಿಮೆ ಬಲವಾಗಲಿ ಅವನ ಶರೀರದಲ್ಲಿನ ಆತ್ಮದ್ದೇ ಎಂದು ತಿಳಿಯಬೇಕು. ಶರೀರದಲ್ಲಿ ಆತ್ಮ ಯಾರಿಗೂ ತಿಳಿಯದೇ ನಿವಾಸ ಮಾಡುತ್ತಿದೆ. ಆದ್ದರಿಂದ ಜೀವಾತ್ಮ ತನ್ನ ಶರೀರದಲ್ಲಿ ಉಂಟಾಗುವ ಬಲ ತನ್ನದೇ ಎಂದುಕೊಳ್ಳುತ್ತಿದ್ದಾನೆ. ಇದನ್ನನುಸರಿಸಿ ಶ್ಲೋಕದಲ್ಲಿ ಜೀವಾತ್ಮ ಬಲ ನನ್ನದೇ ಎಂದು ಅಂದುಕೊಳ್ಳುತ್ತಿರುವನೆಂದು ಭಗವಂತನು ತಿಳಿಸಿದ್ದಾನೆ. ಶ್ಲೋಕದಲ್ಲಿ ವಾಕ್ಯವೊಂದರ ಮೊದಲನೇ ಭಾಗದಲ್ಲಿ ನಾನೇ ದೇವರೆಂದು ಅಂದುಕೊಳ್ಳುವುದು, ಹಾಗೇ ಎರಡನೇ ಭಾಗದಲ್ಲಿ ನಾನೇ ಬಲವೆಂದುಕೊಳ್ಳುವುದು ಜೀವಾತ್ಮವೊಂದರ ಪೂರ್ತಿ ಅಜ್ಞಾನ. ವಾಸ್ತವಕ್ಕೆ ಜೀವಾತ್ಮ ದೇಹದಲ್ಲಿ ದೇವರೂ ಅಲ್ಲ, ಶರೀರದಲ್ಲಿ ಬಲವೂಅಲ್ಲ. ಶರೀರದಲ್ಲಿ ಎರಡನೇ ಆತ್ಮವೊಂದರ ಬಲ ನಾನೇ ಎಂದುಕೊಳ್ಳುವುದರಿಂದ ಜೀವಾತ್ಮ ಆತ್ಮನೊಂದಿಗೆ ಸಮಾನವಾದವನಾಗಿ ಭಾವಿಸಲ್ಪಡುತ್ತಿದ್ದಾನೆ. ಆ ಲೆಕ್ಕ ಪ್ರಕಾರ ಶರೀರದಲ್ಲಿ ಆತ್ಮವೊಂದರ ಅಂಕೆ ಆರು ಅಲ್ಲವೆ! ಆದ್ದರಿಂದ ಜೀವಾತ್ಮ ಅಂಕೆ ಸಹ ಆರಾಗಿಯೇ ಲೆಕ್ಕಿಸಬೇಕಾಗಿ ಬಂದಿದೆ. ಜ್ಞಾನದ ಪ್ರಕಾರ ಜೀವಾತ್ಮ ಅಂಕೆ ಮೂರೇ (3) ಆದರೂ, ಜೀವಾತ್ಮನ ಅಜ್ಞಾನದ ಭಾವದ ಪ್ರಕಾರ ಜೀವಾತ್ಮನ ಅಂಕೆಯನ್ನು ಆತ್ಮನೊಂದಿಗೆ ಸಮಾನವಾಗಿ ಆರಾಗಿ (6) ಲೆಕ್ಕಿಸಬೇಕಾಗಿದೆ. ಇದರ ಪ್ರಕಾರ ಅಜ್ಞಾನ

ದಕಡೆಯಿಂದ ನೋಡಿದರೆ ಮಾಯೆ ಸಂಖ್ಯೆ 666 ಎಂದು ಮೂರು ಆತ್ಮಗಳನ್ನು ಸಮಾನವಾಗಿ ಹೇಳಬೇಕಾಗಿ ಬಂದಿದೆ.

ವಿಶ್ವದಲ್ಲಿ ಎಲ್ಲಿ ನೋಡಿದರೂ ದೇವರನ್ನು ಮೀರಿರುವುದು ಯಾವುದೂ ಇಲ್ಲ. ದೇವರು ಸರ್ವವ್ಯಾಪಿ, ಸರ್ವಸೃಷ್ಟಿಕರ್ತ. ಆದ್ದರಿಂದ ಇತ್ತ ಜ್ಞಾನಿಯಲ್ಲಾಗಲಿ ಅತ್ತ ಅಜ್ಞಾನಿಯಲ್ಲಾಗಲಿ ದೇವರಿದ್ದಾನೆನ್ನುವುದಕ್ಕೆ ಏಕಸಂಖ್ಯೆ ಒಂಬತ್ತೇ ಬರಬೇಕೆನ್ನುವ ಸೂತ್ರದ ಪ್ರಕಾರ ಇಲ್ಲಿ ಜ್ಞಾನಿಯಲ್ಲಿನ ದೇವರ ಕೋಡ್ ಕೊನೆಗೆ ಒಂಬತ್ತೇ ಇರುತ್ತದೆ. ಹಾಗೇ ಅಜ್ಞಾನಿಯಲ್ಲಿನ ಮಾಯೆಕೋಡ್ ಕೊನೆಗೆ ಒಂಬತ್ತೇ ಇರುತ್ತದೆ. ಮನುಷ್ಯ ಜ್ಞಾನಿಯಾಗಲಿ ಅಜ್ಞಾನಿಯಾಗಲಿ ಅವನಲ್ಲಿನ ಮೂರು ಆತ್ಮಗಳು ದೇವರಲ್ಲಿನ ಭಾಗಗಳೇ. ಆದ್ದರಿಂದ ದೇವರ ಅಂಕೆಯಾದ ಕೊನೆಯದು ದೊಡ್ಡದಾದ ಒಂಬತ್ತು ಈಕಡೆ ದೇವರ ಕೋಡಲ್ಲಿ ಇದೆ, ಆಕಡೆ ಮಾಯೆಕೋಡಲ್ಲಿ ಇದೆ. ಜ್ಞಾನದ ಪ್ರಕಾರ ನೋಡಿದರೆ ದೇವರ ಕೋಡಲ್ಲಿ ಆತ್ಮಕ್ಕೆ ಎರಡೂ ಕಡೆ ಇರುವ ಪರಮಾತ್ಮ ಜೀವಾತ್ಮ ಅಂಕೆಗಳು ವಾಸ್ತವಸ್ಥಿತಿಯಲ್ಲಿ 9,3ಗಿ ಇವೆ. ಅಜ್ಞಾನದ ಪ್ರಕಾರ ನೋಡಿದರೆ ಮಾಯೆಕೋಡಲ್ಲಿ ಆತ್ಮಕ್ಕೆ ಎರಡೂ ಕಡೆ ಇರುವ ಪರಮಾತ್ಮ ಜೀವಾತ್ಮಗಳ ಅಂಕೆಗಳು ಅವಾಸ್ತವಸ್ಥಿತಿಯಲ್ಲಿ 6,6 ಎಂದು ಇವೆ.

| | ಪರಮಾತ್ಮ | ಆತ್ಮ | ಜೀವಾತ್ಮ |
|---|---|---|---|
| **ಜ್ಞಾನದ ಪ್ರಕಾರ ದೇವರಕೋಡ್** | **9** | **6** | **3** |
| **ಅಜ್ಞಾನದ ಪ್ರಕಾರ ಮಾಯೆಕೋಡ್** | **6** | **6** | **6** |

ಇಲ್ಲಿಗೆ ಮಾಯೆಕೋಡ್ ಅಥವಾ ಸಾತಾನ್‌ಕೋಡ್, ಅಥವಾ ಸೈತಾನ್‌ಕೋಡ್ 666 ಎಂದು ವಿವರ ತಿಳಿದಿರುತ್ತದೆಂದುಕೊಳ್ಳುತ್ತೇನೆ. ಇದನ್ನು ಗಮನಿಸಿದರೆ ಅಜ್ಞಾನ ಭಾವವಿರುವವನಲ್ಲಾಗಲಿ, ಜ್ಞಾನ ಭಾವವಿರುವವನಲ್ಲಾಗಲಿ ಆತ್ಮ ಸಮಾನವಾಗಿ ಕೆಲಸ ಮಾಡುತ್ತಿದೆ. ಆದ್ದರಿಂದ ಯಾವಕಡೆ ಹೋದರೂ ಅತ್ಮ ಸಂಖ್ಯೆ ಆರಾಗಿಯೇ ಇದೆ. ಅಷ್ಟೇ ಅಲ್ಲದೆ ದೇವರಕೋಡ್ ಇರುವ

ಜ್ಞಾನಿ ಶರೀರದಲ್ಲಾಗಲೀ, ಮಾಯೆಕೋಡ್ ಇರುವ ಅಜ್ಞಾನಿ ಶರೀರದಲ್ಲಾಗಲೀ ದೇವರು ಅಣುಅಣುವಿನಲ್ಲೂ ವ್ಯಾಪಿಸಿದ್ದಾನೆನ್ನುವುದಕ್ಕೆ ಸ್ವಲ್ಪ ಆಧಾರ ಪ್ರತಿ ಶರೀರದಲ್ಲೂ ಇದೆ. ಮನುಷ್ಯ ಶರೀರವನ್ನು ಬೇರ್ಪಡಿಸಿ ನೋಡಿದರೆ ಎಷ್ಟೋ ಕೋಟಿಗಳ ಕಣಗಳಿಂದ ಕೂಡಿಕೊಂಡಿರುವುದಾಗಿ ಇದೆ. ಅಂದರೆ ಶರೀರದಲ್ಲಿನ ಅಣುಅಣುವಿನಲ್ಲೂ ಧಾತು ಕಣಗಳಿವೆಯೆಂದು ತಿಳಿಯುತ್ತಿದೆ. ಕಣ್ಣಿಗೆ ಕಾಣಿಸದ ಕಣಗಳು ಮನುಷ್ಯನ ಶರೀರದಲ್ಲಿ ಎಷ್ಟು ಕೋಟಿ ಇವೆಯೋ ಖಚಿತವಾದ ಸಂಖ್ಯೆ ಹೇಳಲಾರೆವೆಂದೇ ಹೇಳಬಹುದು. ಆದರೂ ಒಂದು ಸಣ್ಣ ಆಧಾರದಿಂದ ಮನುಷ್ಯನಿಗೆ ಒಂಬತ್ತು ವರ್ಷಗಳ ವಯಸ್ಸು ಬರುವುದರಲ್ಲಿ 108 ಕೋಟಿ ಕಣಗಳು ಅಭಿವೃದ್ಧಿಯಾಗಿ ಇರಬಹುದೆನ್ನುವ ಅಭಿಪ್ರಾಯವಿದೆ. ಪ್ರಾಣದಿಂದಿರುವ ಶರೀರದಲ್ಲಿನ ಒಂದು ಕಣವನ್ನು ತೆಗೆದುಕೊಂಡು ನೋಡಿದರೆ ಅದರಲ್ಲಿ ಒಂದು ವಿಧವಾಗಿ ದೈವ ಕಾಣಿಸುತ್ತಾ ಇದೆ. ಅದು ಹೇಗೆಂದರೆ! ದೇವರ ಸಂಖ್ಯೆಯನ್ನು ಮೂರು ಆತ್ಮಗಳ ಸಂಖ್ಯೆ 963 ಆಗಿ ಗುರುತಿಸಿಕೊಂಡಿದ್ದೇವಲ್ಲ! ಈ ಮೂರು ಅಂಕೆಗಳನ್ನು ಸೇರಿಸಿದರೆ 9+6+3=18 ಮೊದಲು ದ್ವಿ ಸಂಖ್ಯೆ ಬರುತ್ತಿದೆ. ಆ ದ್ವಿಸಂಖ್ಯೆಯನ್ನು ಏಕಸಂಖ್ಯೆಯಾಗಿ ಮಾಡಿದರೆ 1+8=9 ಬರುತ್ತಿದೆ. ಇದನ್ನನು ಸರಿಸಿ ಮೂರು ಆತ್ಮಗಳು ಸೇರಿಹೋದರೆ ಕೊನೆಗೆ ಪರಮಾತ್ಮನಾಗಿ ಬದಲಾಗುವ ನೆಂದು ಅರ್ಥವಾಗುತ್ತಿದೆ. ಮೊದಲು ಸೃಷ್ಠಿ ಆದಿಯಲ್ಲಿ ಅದ್ವೈತವಾಗಿರುವ ಪರಮಾತ್ಮ ದ್ವೈತವಾಗಿ ಬದಲಾಗಿದೆ. ಅಂದರೆ ಒಂದಾಗಿರುವ ಪರಮಾತ್ಮನಿಂದ ಆತ್ಮ ಬಿಡುಗಡೆಯಾಗಿ ಎರಡಾಗಿ ಬದಲಾಗಿವೆ. ಅದೇ ಸಂಖ್ಯೆರೂಪದಲ್ಲಿ ಹೇಳಿಕೊಂಡರೆ ಒಂಬತ್ತು ಬೇರೆಯಾಗಿ ಎರಡಾಗಿ ತಯಾರಾಗಿದೆ 9=1+8. ನಂತರ ಮೂರು ಅಂಕೆಗಳಾಗಿ ಬದಲಾಗಿ 963ಆಗಿ ತಯಾರಾಗಿದೆ ಅದೇ ತ್ರೈತ. ಮೊದಲು ಅದ್ವೈತ, ಆ ನಂತರ ದ್ವೈತ, ಆ ನಂತರ ತ್ರೈತ ತಯಾರಾಗಿದೆ. ಜೀವಾತ್ಮ ಮೋಕ್ಷ ಹೊಂದಬೇಕೆಂದರೆ ತ್ರೈತದಿಂದ ದ್ವೈತವಾಗಿ ಬದಲಾಗಬೇಕು, ನಂತರ ಅದ್ವೈತವಾಗಿ ಬದಲಾಗಬೇಕು. ಆದ್ದರಿಂದ ಮೋಕ್ಷ ಹೊಂದಿದವನನ್ನು ದೊಡ್ಡ ಸಂಖ್ಯೆಯಾದ ಒಂಬತ್ತಾಗಿ ಹೇಳಬಹುದು. ಮೋಕ್ಷ ಹೊಂದುವ ಸಮಯದಲ್ಲಿ ಜೀವಾತ್ಮ ಆತ್ಮನೊಂದಿಗೆ ಬೆರೆತು ಹೋಗುತ್ತದೆಂದು,

ಜೀವಾತ್ಮನೊಂದಿಗೆ ಬೆರೆತ ಆತ್ಮ ಪರಮಾತ್ಮನಲ್ಲಿ ಸೇರಿಹೋಗುತ್ತದೆಂದು ಮರಣ ಸಿದ್ಧಾಂತದಲ್ಲಿಯೂ ಸಹ ಹೇಳಿಕೊಂಡಿದ್ದೇವೆ.

ಇದೆಲ್ಲಾ ಹೇಳುವುದು ಏಕೆಂದರೆ ಶರೀರದಲ್ಲಿ ಎಲ್ಲಾ ವ್ಯಾಪಿಸಿ ಇರುವವು ಎರಡೇ ಎರಡು ಆತ್ಮಗಳು. ಅವು ಒಂದು ಪರಮಾತ್ಮ, ಎರಡನೆಯದು ಆತ್ಮ. ಎರಡು ಆತ್ಮಗಳು ಶರೀರವೆಲ್ಲಾ ವ್ಯಾಪಿಸಿವೆಯೆನ್ನುವುದಕ್ಕೆ ಗುರುತಾಗಿ ಶರೀರವೆಲ್ಲಾ ತುಂಬಿಕೊಂಡಿರುವ ಕೋಟಿ ಕಣಗಳಲ್ಲಿ 1:8 ಪರಮಾತ್ಮ ಆತ್ಮಗಳ ನಿಷ್ಪತ್ತಿ ಕಾಣಿಸುತ್ತಾ ಇದೆ. ವಿವರಿಸಿಕೊಂಡು ನೋಡಿದರೆ ಕಣದಲ್ಲಿನ ಹೊರಗಿನ ಪೊರೆಯಲ್ಲಿ ಒಂದು (1) ಭಾಗ ಸೋಡಿಯಂ ಇರುವಾಗ, ಕಣದೊಳಗೆ ಎಂಟು (8) ಭಾಗಗಳು ಪೊಟಾಷಿಯಂ ಇದೆ. ಪ್ರತಿ ಕಣದಲ್ಲಿಯೂ ಸೋಡಿಯಮ್ ಪೊಟಾಷಿಯಮ್ ರೂಪದಲ್ಲಿ ಆತ್ಮ ಪರಮಾತ್ಮಗಳ ಭಾಗಗಳು ಇವೆ. ಇದು ಒಂದು ಮಾನವನ ಶರೀರದಲ್ಲೇ ಅಲ್ಲದೇ ಆತ್ಮಗಳಿರುವ ಸಮಸ್ತ ಜೀವರಾಶಿಗಳಲ್ಲಿಯೂ ಇದೇ ಸಂಖ್ಯೆ ಭಾಗಗಳು (1:8)ಆಗೇ ಇರುತ್ತವೆ. ಇದನ್ನನುಸರಿಸಿ ಸಮಸ್ತ ಜೀವರಾಶಿಗಳಲ್ಲಿಯೂ ದೇವರು ಸಮಾನವಾಗಿ ಇದ್ದಾನೆಂದು ತಿಳಿಯುತ್ತಿದೆ. ಹಾಗೆ ಅಜ್ಞಾನಿಗಳಲ್ಲಿಯೂ ಜ್ಞಾನಿಗಳಲ್ಲಿಯೂ ದೇವರು 1,8 ಭಾಗಗಳಾಗಿ ವಿಭಜಿಸಲ್ಪಟ್ಟು ಒಂಬತ್ತಾಗಿಯೇ ಇದ್ದಾನೆಂದು ತಿಳಿಯುತ್ತಿದೆ.

ಪರಮಾತ್ಮನನ್ನು ಒಬ್ಬನನ್ನೇ ಹೇಳಬೇಕಾಗಿ ಬಂದಾಗ ದೇವರು ಎಲ್ಲದಕ್ಕಿಂತ ದೊಡ್ಡವನು ಆದುದರಿಂದ ಅಂಕೆಗಳಲ್ಲಿ ದೊಡ್ಡದಾದ ಒಂಬತ್ತನ್ನೇ ಹೇಳಬೇಕು. ಜೀವಾತ್ಮ ಶರೀರವೆಲ್ಲಾ ಇಲ್ಲವಾದ್ದರಿಂದ ಪರಮಾತ್ಮ ಆತ್ಮಗಳನ್ನು ಇಬ್ಬರನ್ನೇ ಹೇಳುವಾಗ ಶರೀರವೆಲ್ಲಾ ವ್ಯಾಪಿಸಿರುವ ಕಣಜಾಲಗಳಲ್ಲಿನ ಎರಡಾಗಿರುವ ಕಣ ಭಾಗಗಳನ್ನು ಹೇಳಿಕೊಳ್ಳಬೇಕು. ಒಂದುಕಡೆಇರುವ ಜೀವಾತ್ಮನನ್ನು ಸಹಾ ಸೇರಿಸಿ ಹೇಳಬೇಕಾಗಿ ಬಂದಾಗ ಮೂರು ಅಂಕೆಗಳಾಗಿರುವ ಆತ್ಮಗಳ ಸಂಖ್ಯೆಯನ್ನು ಹೇಳಬೇಕು.

| | | | | | | |
|---|---|---|---|---|---|---|
| ಪರಮಾತ್ಮ | --- | 9 | = | 9 | = | 9 |
| ಪರಮಾತ್ಮ, ಆತ್ಮ | --- | 18 | = | 9 | = | 9 |
| ಪರಮಾತ್ಮ, ಆತ್ಮ, ಜೀವಾತ್ಮ | --- | 963 | = | 18 | = | 9 |

**ವಿಶ್ವವೆಲ್ಲಾ ಇಲ್ಲದೇ ಹೋದರೂ ಉಳಿಯುವುದು ಪರಮಾತ್ಮನೇ ಆದ್ದರಿಂದ = 27––2+7=9**

ದೇವರ ಅಂಕೆ ಮೂರು ಆತ್ಮಗಳಾಗಿದ್ದರೂ, ಎರಡು ಆತ್ಮಗಳಾಗಿದ್ದರೂ, ಕೊನೆಗೆ ಒಂದು ಆತ್ಮವಾಗಿ ಬದಲಾದರೂ ಅದರ ಬೆಲೆ ಬದಲಾಗದೇ ಇರುತ್ತದೆ. ದೇವರು ಮಾಯೆ ಸಂಖ್ಯೆಯಾಗಿ ಇರುವಾಗ ಸಹ ತನ್ನ ಬೆಲೆ ದೊಡ್ಡದಾಗಿಯೇ ಇಟ್ಟುಕೊಂಡಹಾಗೆ ತಿಳಿಯುತ್ತಿದೆ.

**ಮಾಯೆ ಸಂಖ್ಯೆಯಾಗಿ ಇರುವಾಗ 666 = 6+6+6 =18 – 1+8=9**

ಈ ವಿಧವಾಗಿ ದೇವರನ್ನು ಮಾನವ ಶರೀರದಲ್ಲಿನ ಆತ್ಮಗಳಾಗಿ ಲೆಕ್ಕಿಸಿದಾಗಾಗಲಿ, ಇಲ್ಲದೆ ಮಾಯೆಯಾಗಿ ಲೆಕ್ಕಿಸಿದಾಗಾಗಲಿ ತಾನು ಮಾತ್ರ ಎಂದಿಗೂ ದೊಡ್ಡವನು ನಾನೇ ಎಂದು ಅರ್ಥವಾಗುವಹಾಗೆ ಮಾಡಿದ್ದಾನೆ.

ಇಲ್ಲಿಯವರೆಗು ದೇವರು ಮೂರು ಭಾಗಗಳಾಗಿ ವಿಭಜಿಸಲಾಗಿರುವ ವಿಷಯವನ್ನೂ, ಆ ಮೂರು ಭಾಗಗಳಿಗೂ ಗಣಿತಶಾಸ್ತ್ರದಲ್ಲಿ ಗುರುತುಗಳಾಗಿರುವ 3, 6, 9 ಅಂಕೆಗಳನ್ನು ಗುರುತಿಸಿಕೊಂಡು ತಿಳಿದುಕೊಂಡಿದ್ದೇವೆ. ತಿಳಿದುಕೊಂಡಿರುವವರೆಗು ದೇವರು ತ್ರೈತ ಸಿದ್ಧಾಂತ ರೂಪದಲ್ಲಿ ಇರುವಹಾಗೆ, ಅದಕ್ಕೆ ತಕ್ಕ ವಿಧವಾಗಿ ಗಣಿತದಲ್ಲಿ ಮೂರು ಅಂಕೆಗಳಿರುವಹಾಗೆ ತಿಳಿದರೂ, ಆ ಮೂರು ಅಂಕೆಗಳು ತೆಲುಗು ಭಾಷೆಯಲ್ಲಿ ಮೊದಲು ಹುಟ್ಟಿರುವವೆಂದೂ, ತೆಲುಗು ಭಾಷೆ ಸೃಷ್ಟ್ಯಾದಿಯಿಂದ ಇದೆಯೆಂದೂ, ತೆಲುಗು ಭಾಷೆ ದೈವಜ್ಞಾನಕ್ಕೆ ಹತ್ತಿರವಾಗಿರುವ ಭಾಷೆಯೆಂದೂ, ಬಹಳಜನರಿಗೆ ತಿಳಿದಿಲ್ಲ. ಆದ್ದರಿಂದ ತೆಲುಗು ಭಾಷೆಯಲ್ಲಿ ಮೊದಲು ದೇವರ ಗುರುತುಗಳಾದ ಮೂರು, ಆರು, ಒಂಬತ್ತು ಹೇಗೆ ಹುಟ್ಟಿರುವುದೂ, ಆ ಮೂರು ಗುರುತುಗಳು ತೆಲುಗು ಭಾಷೆಯಲ್ಲಿ

ಯಾವ ವಿಧವಾಗಿ ಅರ್ಥ ಕೊಡುತ್ತಿರುವುದು, ಮತ್ತೊಂದು ಕೋನದಲ್ಲಿ ಸ್ವಲ್ಪ ವಿವರವಾಗಿ ತಿಳಿದುಕೊಳ್ಳೋಣ.

ಭಗವಂತನು ತನ್ನ ಭಗವದ್ಗೀತೆಯಲ್ಲಿ ಕ್ಷರನು, ಅಕ್ಷರನು, ಪುರುಷೋತ್ತಮನು ಎನ್ನುವ ಮೂರು ಆತ್ಮಗಳಾಗಿ, ಮೂರು (ಮೂವರು) ಪುರುಷರಾಗಿ, ಮೂರು ಬೆಲೆಗಳಾಗಿ ದೇವರನ್ನು ವಿಭಜಿಸಿ ಹೇಳಿರುವುದರಿಂದ, ಗಣಿತಶಾಸ್ತ್ರದಲ್ಲಿ ಸಹ ಅಂಕೆಗಳನ್ನು ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರ ತಯಾರು ಮಾಡಬೇಕಾಗಿ ಬಂದಿದೆ. ಮೊದಲು ಭಾರತದೇಶವೆಲ್ಲಾ ಎಲ್ಲಾ ಪ್ರಾಂತಗಳಲ್ಲಿ ಒಟ್ಟು ತೆಲುಗು ಭಾಷೆ ಜಾರಿಯಲ್ಲಿ ಇರುತ್ತಿತ್ತು, ಎಲ್ಲರೂ ತೆಲುಗಿನಲ್ಲೇ ಮಾತ ನಾಡುತ್ತಿದ್ದರು. ಆದ್ದರಿಂದ ಗಣಿತಶಾಸ್ತ್ರದಲ್ಲಿನ ಅಂಕೆಗಳನ್ನು ಸಹ ದೇವರ ಭಾವ ಕೆಡದಂತೆ ಇರುವಹಾಗೆ, ದೇವರ ಜ್ಞಾನಕ್ಕೆ ಹತ್ತಿರವಾಗಿ ಇದ್ದು, ದೇವರ ಭಾವವನ್ನು ಹೊರಗೆ ತಿಳಿಸುವಹಾಗೆ, ಅಂಕೆಗಳನ್ನು ತೆಲುಗು ಭಾಷೆಯಲ್ಲಿ ತಯಾರು ಮಾಡುವುದು ನಡೆದಿದೆ. ಆ ವಿಧವಾಗಿ ತಯಾರು ಮಾಡಿರುವುದರಿಂದ, ತೆಲುಗು ಭಾಷೆ ದೈವಜ್ಞಾನಕ್ಕೆ ಬಹಳ ಹತ್ತಿರವಾಗಿದೆಯೆಂದು ಹೇಳುವುದಕ್ಕೆ ಈ ದಿನ ತೆಲುಗು ಅಂಕೆಗಳು ಸಾಕ್ಷಿಯಾಗಿವೆ. ದೈವಜ್ಞಾನಕ್ಕೆ ತೆಲುಗು ಭಾಷೆ ಹತ್ತಿರವಾಗಿ ಇದೆಯೆಂದು ಸಾಕ್ಷಿ ಕೊಡುವಹಾಗೆ, ತೆಲುಗು ಅಂಕೆಗಳು ಹೇಗೆ ತಯಾರಾಗಿವೆಯೋ ಈಗ ಸ್ವಲ್ಪ ಗ್ರಹಿಸಿಕೊಳ್ಳೋಣ.

ದೇವರು ಜೀವಾತ್ಮ, ಆತ್ಮ, ಪರಮಾತ್ಮನಾಗಿ ಮೂರು ವಿಧಗಳಾಗಿ ವಿಭಜಿಸಲ್ಪಟ್ಟಿದ್ದಾನೆಂದು ಎಲ್ಲರಿಗೂ ತಿಳಿಯುವಹಾಗೆ, ಮೂರು ಗೆರೆಗಳಾಗಿರುವ ಒಂದು ಅಂಕೆಯನ್ನು ನಮ್ಮ ಹಿರಿಯರು ತಯಾರು ಮಾಡಿದ್ದಾರೆ. ಪ್ರತಿ ಮನುಷ್ಯನ ಶರೀರದಲ್ಲೂ ಮೂರು ಆತ್ಮಗಳು ಸಮಾನವಾಗಿ ಇರುವುದರಿಂದ, ಪ್ರತಿ ಜೀವಿಗೂ ಆತ್ಮ, ಪರಮಾತ್ಮ ಎರಡು ಸಮಾನವಾಗಿ ಇರುವುದರಿಂದ, ಮೊದಲು ತಯಾರುಮಾಡಿದ ಅಂಕೆಯನ್ನು ಮೂರು ಎಂದು ಹೆಸರು ಇಡುವುದೇ ಅಲ್ಲದೆ, ಅಂಕೆಯನ್ನು ಮೂರು ಸಮಾನ ಗೆರೆಗಳಾಗಿ ಇರುವಹಾಗೆ ತಯಾರು ಮಾಡಿದ್ದಾರೆ. ಮೊದಲು ತಯಾರಾದ ಮೂರು ಅಂಕೆ ಜೀವಾತ್ಮ, ಆತ್ಮ, ಪರಮಾತ್ಮರಿಗೆ ಯಾವ ವಿಧವಾಗಿ ಗುರುತಾಗಿದೆಯೋ ಕೆಳಗಿನ ಚಿತ್ರದಲ್ಲಿ ನೋಡೋಣ.




ಮೂರು ಕೊಂಬುಗಳು ಎಡಗಡೆಗೆ ಗೀಚಲ್ಪಟ್ಟಿವೆ. ಮೂರು ಕೊಂಬುಗಳು ಅಥವಾ ಗೆರೆಗಳು ಒಂದೇ ಅಳತೆಯಲ್ಲಿ ಸಮಾನ ದೂರದಲ್ಲಿ ಇರುವುದರಿಂದ ಒಂದು ಶರೀರದಲ್ಲಿ ಮೂರು ಆತ್ಮಗಳು ಸಮಾನವಾಗಿ ಇವೆಯೆಂದು ತಿಳಿಯುತ್ತಿದೆ. ಮೂರು ಅಂಕೆಯಲ್ಲಿರುವ ಕೆಳಗಿನ ಗೆರೆ ಜೀವಾತ್ಮನಾಗಿ ಗುರುತಿಸಲಾಗಿರುವಾಗ, ಉಳಿದ ಮೇಲಿನ ಎರಡು ಗೆರೆಗಳಲ್ಲಿ ಮಧ್ಯದಲ್ಲಿನದು ಆತ್ಮನಾಗಿ, ಮೇಲಿರುವುದು ಪರಮಾತ್ಮನಾಗಿ ಹೇಳಲಾಗುತ್ತಿದೆ. ಅಷ್ಟೇ ಅಲ್ಲದೆ ಮೂರು ಅಂಕೆಯನ್ನು ಜೀವಾತ್ಮನಿಗೆ ಗುರುತಾಗಿ ಇರಿಸಲಾಗಿದ್ದು ಅದರ ಮೇಲೆ ಆತ್ಮ, ಪರಮಾತ್ಮ ಎನ್ನುವ ಎರಡು ಆತ್ಮಗಳಿರುವ ಹಾಗೆ ತೋರಿಸಲಾಗಿದೆ. ಜೀವಿಯು ಯಾವಾಗಲೂ ಪ್ರಕೃತಿ ಕಡೆಯೇ ಧ್ಯಾಸವನ್ನು ಹೊಂದಿರುತ್ತಾನೆ. ಪ್ರಕೃತಿ ಆಲೋಚನೆಗಳಲ್ಲಿ ಮುಳಿಗಿರುತ್ತಾನೆ. ಪ್ರಕೃತಿ ಜನಿತ ಗುಣಗಳ ಮಧ್ಯದಲ್ಲಿ ನಿವಾಸಿಸುತ್ತಿರುತ್ತಾನೆ ಆದ್ದರಿಂದ, ಎಡಗಡೆ ಎಂದರೆ ಜೀವಾತ್ಮನಿಗೆ ಬಲಗಡೆಗೆ ಪ್ರಕೃತಿ ಇದೆಯೆಂದು ಪ್ರಕೃತಿ ಕಡೆಯೇ ಜೀವಿಯಿರುವುದರಿಂದ, ಜೀವಿಗೆ ಬಲ ಕಡೆಗೆ ಮಾತ್ರ ಮೂರು ಕೊನೆಗಳಿರುವಹಾಗೆ ಮೂರು ಅಂಕೆಯಲ್ಲಿ ತೋರಿಸುವುದು ನಡೆದಿದೆ.

ಪ್ರಪಂಚದಲ್ಲಿ ಎಲ್ಲದಕ್ಕಿಂತ ಮೊದಲು ದೈವಜ್ಞಾನವನ್ನು ಅನುಸರಿಸಿ ಜೀವಾತ್ಮನಿಗೆ ಗುರುತಾಗಿ ತೆಲುಗುಭಾಷೆಯಲ್ಲೇ ಮೂರು ಅಂಕೆಯನ್ನು

ತಯಾರುಮಾಡಿದ್ದಾರೆ. ನಂತರ ಯಾವ ಭಾಷೆಯಲ್ಲಿ ಅಂಕೆಗಳು ತಯಾರು ಮಾಡಿದರೂ, ತೆಲುಗು ಭಾಷೆಯಲ್ಲಿನ ಮೂರು ಅಂಕೆಯನ್ನು ಅನುಸರಿಸಿಯೇ ತಯಾರುಮಾಡಿಕೊಂಡಿದ್ದಾರೆ. ಆದ್ದರಿಂದ ಎಲ್ಲಾ ಭಾಷೆಗಳಿಗೂ ಆಧಾರವಾಗಿರುವುದು ತೆಲುಗು ಭಾಷೆಯೆಂದು ಹೇಳಬಹುದು. ಕೆಲವರಿಗೆ ಇಲ್ಲಿ ಒಂದು ಪ್ರಶ್ನೆ ಬರಬಹುದು. ಆ ಪ್ರಶ್ನೆಯ ಪ್ರಕಾರ ನಮ್ಮ ಮಾತು ಅಸತ್ಯವೆಂದುಕೊಳ್ಳುವುದಕ್ಕೆ ಅವಕಾಶವಿದೆ. ಆದ್ದರಿಂದ ಆ ಪ್ರಶ್ನೆಯನ್ನು, ಅದಕ್ಕೆ ಉತ್ತರವನ್ನು ಮೊದಲು ತಿಳಿದುಕೊಳ್ಳೋಣ. ಪ್ರಶ್ನೆ ಏನೆಂದರೆ! ಈ ಮಧ್ಯೆ ಕಾಲದಲ್ಲಿ ಕೆಲವು ಸಾವಿರ ವರ್ಷಗಳ ಪೂರ್ವದಲ್ಲಿ ಗಣಿತ ಶಾಸ್ತ್ರವನ್ನು ಅದರ ಅಂಕೆಗಳನ್ನು ಕಂಡುಕೊಂಡಿದ್ದಾರೆ. ನೀವು ಹೇಳುವುದು ಸೃಷ್ಟಿ ಆದಿಯಲ್ಲೇ ಮೊದಲ ಯುಗವಾದ ಕೃತಯುಗದಲ್ಲೇ ತೆಲುಗು ಭಾಷೆ ಇರುವಹಾಗೆ, ಆಗಲೇ ಜ್ಞಾನದ ಪ್ರಕಾರ ಗಣಿತಶಾಸ್ತ್ರ ಅಂಕೆಗಳನ್ನು ತಯಾರುಮಾಡಿದ ಹಾಗೆ ನೀವು ಹೇಳುತ್ತಿದ್ದೀರಾ. ಉಳಿದ ಎಲ್ಲ ದೇಶಗಳಲ್ಲಿ ಸಹ ಪೂರ್ವದಲ್ಲಿ ಅಂಕೆಗಳು ಇಲ್ಲವೆಂದು, ಈ ಮಧ್ಯೆ ಕಾಲದಲ್ಲೇ ಗಣಿತಶಾಸ್ತ್ರ ಅಂಕೆಗಳನ್ನು ತಯಾರು ಮಾಡಿದ್ದಾರೆಂದು ಹೇಳುವುದು ಕೇಳಿದ್ದೇವೆ. ಹಾಗಿರುವಾಗ ನಿಮ್ಮ ಮಾತನ್ನು ನಾವು ಹೇಗೆ ನಂಬಬೇಕು? ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಈ ವಿಧವಾಗಿ ಇದೆ.

ಸೃಷ್ಟಿ ಆದಿಯಲ್ಲೇ ದೈವಜ್ಞಾನ ಭೂಮಿಮೇಲೆ ತಿಳಿದುಬಂದಿದೆ. ಹಾಗೆ ತಿಳಿದಿರುವ ಜ್ಞಾನವನ್ನು ಜನರೆಲ್ಲರೂ ತಿಳಿಯುವಹಾಗೆ ಮಾಡುವುದಕ್ಕೆ ಕೆಲವರು ತಿಳಿದ ಜ್ಞಾನಿಗಳು, ಮಾತುಗಳ ರೂಪದಲ್ಲಿ ಜ್ಞಾನವನ್ನು ಬೋಧಿಸುತ್ತಿದ್ದರು. ಜ್ಞಾನವನ್ನು ಬೋಧಿಸುವುದರಿಂದ ಕೆಲವರು ತಿಳಿದುಕೊಂಡಿರುವಾಗ, ಕೆಲವರು ಬೋಧನೆ ಕೇಳುವುದಕ್ಕೆ ಅವಕಾಶ ಇಲ್ಲದವರು, ಬೋಧಿಸುವವರ ಹತ್ತಿರಕ್ಕೆ ಹೋಗದವರು ಜ್ಞಾನವನ್ನು ತಿಳಿಯುವುದಕ್ಕೆ ಅವಕಾಶವಿಲ್ಲದೆ ಅಜ್ಞಾನಿಗಳಾಗಿ ಕೆಲವರು ಉಳಿದಿದ್ದಾರೆ. ಅದನ್ನು ಗಮನಿಸಿದ ಹಿರಿಯರು ದೇಶದಲ್ಲಿರುವವ ರೆಲ್ಲರೂ ಜ್ಞಾನಿಗಳಾಗಿ ಬದಲಾಗುವುದಕ್ಕೆ ಅವಕಾಶ ಕಲ್ಪಿಸಬೇಕೆನ್ನುವ

ಉದ್ದೇಶದಿಂದಲೇ ಕೆಲವು ಮುಖ್ಯವಾದ ಜ್ಞಾನ ವಿಷಯಗಳನ್ನು ದೃಶ್ಯರೂಪವಾಗಿ ಇರುವಹಾಗೆ ಏರ್ಪಾಟನ್ನು ಮಾಡಿದ್ದಾರೆ. ಆ ಪ್ರಯತ್ನದಲ್ಲಿ ಭಾಗವಾಗಿ ಪ್ರತಿ ಊರಲ್ಲೂ ಬಯಲು ಪ್ರಾಂತದಲ್ಲಿ ಒಂದು ಈಶ್ವರಲಿಂಗವನ್ನು ಇಡುತ್ತಿದ್ದರು. ಈಶ್ವರಲಿಂಗವನ್ನು ನೋಡಿ ಮೂಗು ಮುಖ ಆಕಾರವಿಲ್ಲದ ಕಲ್ಲಿನ ಗುಂಡನ್ನು ಏಕೆ ಇಟ್ಟಿದ್ದಾರೆಂದು ಯಾರಾದರೂ ಅಂದುಕೊಂಡರೆ, ಅದಕ್ಕೆ ಉತ್ತರವಾಗಿರುವ ವಿಷಯವನ್ನು ಶಿಲಾಫಲಕದ ಮೇಲೆ ಬರೆದು ಅಲ್ಲೇ ಕಾಣಿಸುವಹಾಗೆ ಹಿರಿಯರು ಏರ್ಪಾಟು ಮಾಡಿದ್ದಾರೆ. ಒಂದುವೇಳೆ ಯಾರಾದರೂ ಓದು ಬಾರದವರಿದ್ದರೆ ಅವರಿಗೆ ವಿವರವನ್ನು ಹೇಳುವುದಕ್ಕೆ ಒಬ್ಬ ಬ್ರಾಹ್ಮಣನನ್ನು ಅಲ್ಲಿಟ್ಟು ಬೋಧಿಸುವಹಾಗೆ ಏರ್ಪಾಟು ಮಾಡುತ್ತಿದ್ದರು. ಅಲ್ಲಿ ಬೋಧಿಸುವುದಕ್ಕೆ ಇರುವ ಬ್ರಹ್ಮಜ್ಞಾನಿಯಾದ ಬ್ರಾಹ್ಮಣನಿಗೆ ಬೇಕಾದ ಪೋಷಣೆ ಎಲ್ಲವೂ ಆ ಗ್ರಾಮ ಪ್ರಜೆಗಳೇ ನೋಡಿಕೊಳ್ಳುವಹಾಗೆ ಏರ್ಪಾಟು ಮಾಡುತ್ತಿದ್ದರು. ಆದಿನ ದೃಶ್ಯರೂಪವಾಗಿರುವ ಈಶ್ವರ ಲಿಂಗವನ್ನು ಕುರಿತು ಹೇಳುವವನನ್ನು "ಯತಿ" ಎಂದು ಅನ್ನುತ್ತಿದ್ದರು. ಯತಿ ಎಂದರೆ 'ಯರಸಿದವನು' ಎಂದು ಅರ್ಥ. ಯರಸಿದವನು ಎಂದರೆ 'ತಿಳಿದವನು' ಎಂಬ ಭಾವ. ಯರಸಿದ ಎನ್ನುವ ಪದದಿಂದ ಯತಿ ಎನ್ನುವ ಶಬ್ಧ ಹುಟ್ಟಿದೆ. ಯತಿ ಎಂದರೆ ಜ್ಞಾನಿ ಎಂದು ಸಹ ಅರ್ಥ ಇದೆ.

ಪೂರ್ವದಲ್ಲಿ ಈಶ್ವರಲಿಂಗದ ಹತ್ತಿರ ನಿಯಮಿಸಲಾಗಿರುವ ಯತಿ ಅಥವಾ ಜ್ಞಾನಿ ಎನ್ನುವವನು ಈಶ್ವರಲಿಂಗವನ್ನು ಕುರಿತು ಅಲ್ಲಿಗೆ ಬಂದವರೆಲ್ಲರಿಗೂ ಬೋಧಿಸುತ್ತಿದ್ದನು. ಆದಿನ ಈಶ್ವರಲಿಂಗ ಹೊರತು ಎಂತಹ ಗುಡಿಗಳೂ, ಗೋಪುರಗಳೂ ತಯಾರಾಗಲಿಲ್ಲ, ಇರಲಿಲ್ಲ. ಗುಡಿಗಳು ಇಲ್ಲ ಅದರಲ್ಲಿ ಅರ್ಚಕರು, ಪೂಜಾರಿಗಳು ಇಲ್ಲ. ಮೊದಲು ಈಶ್ವರಲಿಂಗ ಹೊರತು ದೈವಿಕ ಜ್ಞಾನಕ್ಕೆ ಸಂಬಂಧಿಸಿರುವುದು ಯಾವುದೂ ಇಲ್ಲ. ಲಿಂಗದ ಹತ್ತಿರವಿರುವ ಯತಿ ಲಿಂಗವನ್ನು ಕುರಿತು ಹೇಳುವವನು ಮಾತ್ರವೇ ಆಗಲಿ, ಪೂಜಾರಿ ಅಲ್ಲ. ಆ ದಿನಗಳಲ್ಲಿ ಈಶ್ವರ ಲಿಂಗಕ್ಕೆ ಪೂಜೆಗಳು ಮಾಡಲಿಲ್ಲ. ಪೂಜೆಗಳು

ಮಾಡಬಾರದೆನ್ನುವ ನಿಯಮ ಇರುತ್ತಿತ್ತು. ಅಷ್ಟೇ ಅಲ್ಲದೆ ಈಶ್ವರ ಲಿಂಗವನ್ನು ಎಲ್ಲಿ ಪ್ರತಿಷ್ಠಿಸಿದರೂ ಅದು ಬಯಲು ಪ್ರಾಂತದಲ್ಲೇ ಇರುತ್ತಿತ್ತು. ಲಿಂಗಕ್ಕೆ ಗರ್ಭಗುಡಿಯನ್ನು ಕಟ್ಟುತ್ತಿರಲಿಲ್ಲ. ಗುಡಿ ಕಟ್ಟುವುದಾಗಲೀ, ಪೂಜೆಗಳು ಮಾಡುವುದಾಗಲೀ ಮಾಡುವವರಲ್ಲ. ಹಾಗೆ ಮಾಡಿದರೆ ದೇವರ ಜ್ಞಾನಕ್ಕೆ ಅರ್ಥವೇ ಇಲ್ಲದಂತೆ ಹೋಗುತ್ತದೆಂದು ಅವರಿಗೆ ಚೆನ್ನಾಗಿ ತಿಳಿದಿತ್ತು. ಈಶ್ವರ ಲಿಂಗದ ಹತ್ತಿರ ನಿಯಮಿಸಲಾಗಿರುವ ವ್ಯಕ್ತಿ ಪ್ರತಿ ದಿನ ಲಿಂಗವನ್ನು ಶುಭ್ರವಾಗಿ ತೊಳೆದು ಹೊರಸಿ ಇಡುತ್ತಿದ್ದನು. ಅಷ್ಟೇ ಹೊರತು ಪೂಜೆಗಳಾಗಲೀ, ಅಭಿಷೇಕಗಳಾಗಲೀ ಮಾಡುವವರಲ್ಲ. ಕಾಲಕ್ರಮೇಣ ಲಿಂಗದ ಹತ್ತಿರ ಇರುವ ಯತಿ (ಜ್ಞಾನಿ) ಪೂಜಾರಿಯಾಗಿ ಬದಲಾಗಿದ್ದಾನೆ. ಪೂಜಾರಿಯೊಂದಿಗೆ ಪೂಜೆಗಳು, ಅಭಿಷೇಕಗಳು ಈಶ್ವರಲಿಂಗಕ್ಕೆ ಮಾಡುವುದು ನಡೆಯುತ್ತಿದೆ. ಇನ್ನೂ ವಿಚಿತ್ರವಾಗಿ ಪೂರ್ವಕಾಲ ಆಚರಣಗೆ ವಿರುದ್ಧವಾಗಿ ಲಿಂಗಕ್ಕೆ ಗುಡಿಕಟ್ಟುವುದೂ, ಗರ್ಭಗುಡಿಯಲ್ಲಿ ಲಿಂಗದ ಪಕ್ಕದಲ್ಲಿ ಪಾರ್ವತಿದೇವಿ ಪ್ರತಿಮೆಯನ್ನು ಇಡುವುದೂ, ಲಿಂಗಕ್ಕೆ ವಿರುದ್ಧವಾಗಿ ಹೊರಗೆ ನಂದಿಯನ್ನು ಇಡುವುದು ನಡೆದಿದೆ. ಇದೆಲ್ಲವೂ ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರ ಅಶಾಸ್ತ್ರೀಯ, ಅಧರ್ಮ. ಆದರೂ ಯಾರೂ ಅದರ ಬಗ್ಗೆ ತಲೆಕೆಡಿಸಿಕೊಳ್ಳುತ್ತಿಲ್ಲ. ಪೂರ್ವದ ಈಶ್ವರ ಲಿಂಗವನ್ನು ಪ್ರತಿಷ್ಠಿಸಿದ ಉದ್ದೇಶವಾಗಲಿ, ಜ್ಞಾನವಾಗಲಿ, ಈದಿನ ಕಿಂಚಿತ್ತೂ ಇಲ್ಲದಂತೆ ಹೋಗಿವೆ. ನಾವು ಆಚರಿಸುವ ಕಾರ್ಯಗಳಲ್ಲಿಯೂ ಮತ್ತು ಭಾವದಲ್ಲಿಯೂ ಎಷ್ಟೋ ಬದಲಾವಣೆ ಬಂದರೂ ಲಿಂಗದಲ್ಲಿ ಎಂತಹ ಬದಲಾವಣೆ ಬರಲಿಲ್ಲ. ಪೂರ್ವದಲ್ಲಿ ಹೇಗೆ ತಯಾರಿಸಿದ ಆಕಾರ ಹಾಗೇ ಇದೆ. ಲಿಂಗದ ಕೆಳಗೆ ಪಾಣಿಮಟ್ಟ ಬದಲಾಗಲಿಲ್ಲ, ಲಿಂಗದ ಮೇಲೆ ಮೂರು ರೇಖೆಗಳು ಬದಲಾಗಲಿಲ್ಲ.

ಲಿಂಗವನ್ನು ದೇವರಿಗೆ ಗುರುತಾಗಿ ಪೂರ್ವದಲ್ಲಿ ಪ್ರತಿಷ್ಠಿಸಿ ತೋರಿಸುವುದು ನಡೆದಿದೆ. ದೇವರಿಗೆ ರೂಪವು ಇಲ್ಲ, ಹೆಸರು ಇಲ್ಲ, ಕಾರ್ಯವೂ ಇಲ್ಲ ಎನ್ನುವ ಜ್ಞಾನ ನಮಗೆ ತಿಳಿಯುವ ಸಲುವಾಗಿ, ಮೂಗು ಮುಖ ಇಲ್ಲದ ಗುಂಡನ್ನು ದೇವರಾಗಿ ತೋರಿಸುವುದು ನಡೆದಿದೆ. ಮುಖ ಇಲ್ಲ

ಆದ್ದರಿಂದ ದೇವರಿಗೆ ರೂಪವಿಲ್ಲವೆಂದು ಯತಿಯಾಗಿರುವವನು ಪ್ರಜೆಗಳಿಗೆ ತಿಳಿಸುತ್ತಿದ್ದನು. ಅಷ್ಟೇ ಅಲ್ಲದೆ ಲಿಂಗ ಕದಲದೆ ಇರುವುದರಿಂದ ದೇವರಿಗೆ ಕೆಲಸವಿಲ್ಲವೆಂದು ತಿಳಿಸುತ್ತಿದ್ದನು. ದೇವರಿಗೆ ಹೆಸರು ಇಲ್ಲ ಎಂದು ತಿಳಿಯುವಹಾಗೆ **'ಈಶ್ವರ'** ಎಂದು ಹೇಳುವುದು ನಡೆದಿದೆ. ಈಶ್ವರ ಎಂದರೆ ಅಧಿಪತಿಯೆಂದು ಅರ್ಥ ಆದರೆ, ಅದು ಒಂದು ಹೆಸರಲ್ಲ. ಅದರಿಂದ ದೇವರು ಎಲ್ಲರಿಗೂ ಅಧಿಪತಿಯೆನ್ನುವ ಭಾವ ತಿಳಿಯುತ್ತಿದೆಯಾಗಲಿ ಹೆಸರು ತಿಳಿಯುತ್ತಿಲ್ಲ. ಎಲ್ಲರಿಗೂ ಸರ್ವ ಸೃಷ್ಠಿಗೂ ಅಧಿಪತಿಯಾಗಿರುವ ದೇವರು ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿದ್ದಾನೆಂದು ತಿಳಿಸುವ ಸಲುವಾಗಿ ಲಿಂಗದ ಮೇಲೆ ಮೂರು ರೇಖೆಗಳನ್ನು ಪೂರ್ವದ ಜ್ಞಾನಿಗಳು ಇಡುವುದು ನಡೆದಿದೆ. ಮೂರು ಬಿಳಿ ವಿಭೂತಿರೇಖೆಗಳನ್ನು ಲಿಂಗದ ಮೇಲೆ ತೋರಿಸುವುದರಿಂದ, ದೇವರು ಭೂಮಿಮೇಲೆ ಜೀವಾತ್ಮ, ಆತ್ಮ, ಪರಮಾತ್ಮನಾಗಿದ್ದಾನೆಂದು, ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 16, 17ನೇ ಶ್ಲೋಕಗಳಲ್ಲಿ ಹೇಳಿದ ಭಾವಕ್ಕೆ ಸರಿಹೋಗುವಹಾಗೆ ತಿಳಿಯುತ್ತಿದೆ. ಒಬ್ಬ ಮನುಷ್ಯನ ಶರೀರದಲ್ಲಿ ದೈವ ಜೀವಾತ್ಮವಾಗಿ, ಆತ್ಮವಾಗಿ, ಪರಮಾತ್ಮನಾಗಿ ವಿಭಜಿಸಲ್ಪಟ್ಟಿದ್ದಾನೆಂದು ತಿಳಿಯುವಹಾಗೆ ಮೂರು ರೇಖೆಗಳನ್ನು ಲಿಂಗದ ಮೇಲೆ ಇಟ್ಟು ತೋರಿಸುವುದು ನಡೆದಿದೆ. ಆ ವಿಧವಾಗಿ ಲಿಂಗದ ಮೇಲೆ ತೋರಿಸಲಾಗಿರುವ ಮೂರು ಆತ್ಮಗಳ ಗುರುತೇ ಗಣಿತಶಾಸ್ತ್ರದಲ್ಲಿ ಮೂರು ಅಂಕೆಯಾಗಿ ತಯಾರಾಗಿದೆ. ಮೂರು ಅಂಕೆ ಹೇಗೆ ತಯಾರಾಗಿದೆಯೋ, ಅದರಲ್ಲಿ ಮೂರು ಆತ್ಮಗಳ ಗುರುತು ಹೇಗೆ ಇದೆಯೋ, ಸ್ವಲ್ಪ ವಿವರವಾಗಿ ತಿಳಿದುಕೊಳ್ಳೋಣ. ಲಿಂಗದ ಮೇಲೆ ಮೂರು ರೇಖೆಗಳು ಹೇಗೆ ಇವೆಯೋ ಎಲ್ಲರಿಗೂ ತಿಳಿದಿದೆ. ಹಾಗೆ ಇರುವ ರೇಖೆಗಳಲ್ಲಿ ಕೆಳಗಿನ ರೇಖೆ ಜೀವಾತ್ಮ ಗುರುತೆಂದು, ಮಧ್ಯ ರೇಖೆ ಆತ್ಮಕ್ಕೆ ಗುರುತೆಂದೂ, ಮೇಲಿರುವ ರೇಖೆ ಪರಮಾತ್ಮನಿಗೆ ಗುರುತೆಂದು ಆದಿನ ಲಿಂಗದ ಹತ್ತಿರ ಯತಿಯಾಗಿ (ಜ್ಞಾನಿಯಾಗಿ) ಇರುವ ವ್ಯಕ್ತಿ ತಿಳಿಸುತ್ತಿದ್ದನು. ಮೂರು ರೇಖೆಗಳು ಲಿಂಗದ ಮೇಲೆ ಹೇಗೆ ಇವೆಯೋ ಕೆಳಗಿನ ಚಿತ್ರಪಟದಲ್ಲಿ ನೋಡೋಣ.




ಈ ಮೂರು ರೇಖೆಗಳು ಮೂರು ಆತ್ಮಗಳಾಗಿ ನಮ್ಮ ಶರೀರದಲ್ಲೇ ಇವೆಯೆಂದು ತಿಳಿಯುತ್ತಿದೆ. ಶರೀರದಲ್ಲಿರುವ ಮೂರು ಆತ್ಮಗಳಲ್ಲಿ ಮಧ್ಯದಲ್ಲಿರುವ ಆತ್ಮ ಕೆಳಗೆ ಜೀವಾತ್ಮನೊಂದಿಗೂ, ಮೇಲೆ ಪರಮಾತ್ಮನೊಂದಿಗೂ ಸಂಬಂಧ ಇಟ್ಟುಕೊಂಡಿದೆ. ಆ ಸಂಬಂಧ ಮನುಷ್ಯರಿಗೆ ತಿಳಿಯುವಹಾಗೆ ಮಧ್ಯದಲ್ಲಿರುವ ಆತ್ಮ ರೇಖೆಯನ್ನು ಕೆಳಗೆ ಜೀವಾತ್ಮ ರೇಖೆಗೆ ಅನುಸಂಧಾನ ಮಾಡುವುದು ನಡೆದಿದೆ. ಹಾಗೇ ಮಧ್ಯ ರೇಖೆಯಿಂದ ಮೇಲಿರುವ ಪರಮಾತ್ಮ ರೇಖೆಗು ಸಹ ಅನುಸಂಧಾನ ಮಾಡುವುದು ನಡೆದಿದೆ. ಯಾವಾಗಾದರೆ ಮಧ್ಯೆ ರೇಖೆಯಿಂದ ಕೆಳಗಿನ ರೇಖೆಗು, ಮೇಲಿನ ರೇಖೆಗು ಅನುಸಂಧಾನ ಮಾಡಿದ್ದೇವೋ ಆಗ ಮೂರು ಅಂಕೆಯ ಆಕೃತಿ ಏರ್ಪಡುತ್ತಿದೆ. ಮೂರು ಅಂಕೆ ಹೇಗೆ ಏರ್ಪಟ್ಟಿದೆಯೋ ತಿಳಿಯುವುದಕ್ಕೆ ಚೆನ್ನಾಗಿ ಅರ್ಥವಾಗುವುದಕ್ಕೆ ನಂತರ ಪುಟದಲ್ಲಿನ ಚಿತ್ರವನ್ನು ನೋಡಿರಿ.



ತೆಲುಗು ಭಾಷೆಯಲ್ಲಿ ದೈವಜ್ಞಾನಕ್ಕೆ ಪೂರ್ತಿ ಹತ್ತಿರವಾಗಿರುವ ಮೂರು ಅಂಕೆ ಮೂರು ಆತ್ಮಗಳಿಂದಲೇ ಏರ್ಪಟ್ಟಿದೆಯೆಂದು ತಿಳಿಯುತ್ತಿದೆ. ಮೂರು

ಆತ್ಮಗಳ ಜ್ಞಾನವೇ ಭಗವದ್ಗೀತೆಯಲ್ಲಿ ಹೇಳಲಾಗಿರುವ ವಿಶೇಷ ಜ್ಞಾನ. ಆದ್ದರಿಂದ ಮೂರು ಆತ್ಮಗಳ ಸಂಧಾನದಿಂದಲೇ ಏರ್ಪಟ್ಟ ಮೂರನ್ನು ಗ್ರಹಿಸಿದರೆ, ಅದೇ ಜ್ಞಾನವನ್ನು ಬೋಧಿಸುವ ಉಳಿದ ಆರು, ಒಂಬತ್ತು ವೊಂದರ ವಿಶಿಷ್ಠತೆ ಸಹ ತಿಳಿಯುತ್ತದೆ. ಶರೀರದಲ್ಲಿನ ಜೀವಾತ್ಮಗೆ ಗುರುತಾಗಿ ಮೂರು ಅಂಕೆಯನ್ನು, ಮೂರು ರೇಖೆಗಳನ್ನು ಸೇರಿಸಿ ಮಾಡಿದಹಾಗೆ ಈಗ ನಮಗೆ ಚೆನ್ನಾಗಿ ಅರ್ಥವಾಗಿದೆ. ಅದೇ ಮೂರು ರೇಖೆಗಳನ್ನು ಜೀವಾತ್ಮನಿಗೆ ಸೇರಿಸಿದಹಾಗೆ ಸೇರಿಸಿ ಆತ್ಮವನ್ನು ಸೂಚಿಸುವ ಆರಾಗಿಯೂ, ಪರಮಾತ್ಮನನ್ನು ಸೂಚಿಸುವ ಒಂಬತ್ತಾಗಿಯೂ ತಯಾರು ಮಾಡಿದ್ದಾರೆ. ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೆ! ಇದೆಲ್ಲವೂ ಒಂದು ತೆಲುಗು ಭಾಷೆಯಲ್ಲಿಯೇ ಸಾಧ್ಯವಾಗಿದೆ. ಮೂರು, ಆರು, ಒಂಬತ್ತು ಅಂಕೆಗಳಿಗೆ ಮೂರು ಕೊಂಬುಗಳು ಅಥವಾ ಮೂರು ಗೆರೆಗಳ ಕೊನೆಗಳು ಒಂದು ತೆಲುಗು ಭಾಷೆಯಲ್ಲಿನ ಅಂಕೆಗಳಿಗೆ ಮಾತ್ರವೇ ಇವೆ. ಉಳಿದ ಭಾಷೆಗಳಲ್ಲಿ ಮೂರಕ್ಕೆ ಹೊರತು ಉಳಿದ ಅಂಕೆಗಳಿಗೆ ಮೂರು ಕೊಂಬುಗಳು ಇಲ್ಲ. ತೆಲುಗು ಅಂಕೆಗಳನ್ನನುಸರಿಸಿ ಉಳಿದ ಭಾಷೆಗಳಲ್ಲಿನ ಅಂಕೆಗಳನ್ನು ತಯಾರು ಮಾಡಿಕೊಂಡಿದ್ದಾರೆ. ಆದ್ದರಿಂದ ಉಳಿದ ಭಾಷೆಗಳಲ್ಲೂ ಸಹ ಮೂರಕ್ಕೆ ಮಾತ್ರ ಮೂರು ಕೊನೆಗಳು ಕಾಣಿಸುತ್ತಿವೆ.

ಪ್ರಸ್ತುತ ಎಲ್ಲರೂ ಗಣಿತಶಾಸ್ತ್ರವನ್ನು ತಿಳಿದಿದ್ದರೂ, ಅಂಕೆಗಳನ್ನು ಮಾತ್ರ ಎಲ್ಲರೂ ಆಂಗ್ಲ ಭಾಷೆಯಲ್ಲಿನ ಅಂಕೆಗಳನ್ನೇ ಬರೆಯುತ್ತಿದ್ದಾರೆ. ತೆಲುಗಿನವರು ಸಹ ತೆಲುಗು ಅಂಕೆಗಳನ್ನು ಬರೆಯದಂತೆ ಇಂಗ್ಲೀಷು ಅಕ್ಷರಗಳಿಗೇ ಅಭ್ಯಾಸ ವಾಗಿದ್ದಾರೆ. ಕೆಲವರು ತೆಲುಗುದವರಿಗೆ ತೆಲುಗು ಭಾಷೆ ಅಂಕೆಗಳೇ ತಿಳಿಯದಂತೆ ಹೋಗಿವೆ. ಇಂಗ್ಲೀಷು ಭಾಷೆಯಲ್ಲಿನ ಅಂಕೆಗಳನ್ನು ಯಾವುದಕ್ಕೆ ಎಷ್ಟು ಕೊಂಬುಗಳಿವೆಯೋ ಮೊದಲು ಗಮನಿಸಿದರೆ ನಂತರ ತೆಲುಗು ಅಂಕೆಗಳ ವಿಶಿಷ್ಠತೆ ಚೆನ್ನಾಗಿ ಅರ್ಥವಾಗುತ್ತದೆ. ಆದ್ದರಿಂದ ಮೊದಲು ನಾವು ಈ ದಿನ ಬರೆಯುತ್ತಿರುವ ಇಂಗ್ಲೀಷು ಅಂಕೆಗಳನ್ನು ಗಮನಿಸೋಣ. 0 1 2 3 4 5 6 7 8 9 ಈ ಹತ್ತು ಅಂಕೆಗಳಿಗೂ ಕೊಂಬುಗಳನ್ನು ಗಮನಿಸಿದರೆ ಹೀಗೆ ಇವೆ.




ಮೊದಲನೆಯದು ಸೊನ್ನೆ, ಸೊನ್ನೆಗೆ ಒಂದು ಕೊಂಬು ಸಹ ಇರುವುದಿಲ್ಲ. ಶೂನ್ಯವನ್ನು ತಿಳಿಸುವುದು ಆದ್ದರಿಂದ, ಇದಕ್ಕೆ ಸೊನ್ನೆ ಎಂದು ಹೆಸರು ಬಂದಿದೆ.




ಸೊನ್ನೆ ನಂತರ ಇರುವ ಅಂಕೆ ಒಂದು. ಒಂದಕ್ಕೆ ಮೇಲೆ ಒಂದು ಕೊನೆ, ಕೆಳಗೆ ಒಂದು ಕೊನೆ ಒಟ್ಟು ಎರಡು ಕೊನೆಗಳು ಅಥವಾ ಎರಡು ಕೊಂಬುಗಳು ಇವೆ.




ಒಂದರ ನಂತರ ಎರಡು ಅಂಕೆ ಇದೆ. ಇದಕ್ಕೂ ಸಹ ಮುಂದೆ ಒಂದು. ಹಿಂದೆ ಒಂದು ಎರಡು ಕೊನೆಗಳು ಇವೆ.




ಎರಡರ ನಂತರ ಮೂರು ಅಂಕೆ ಇದೆ. ಮೂರಕ್ಕೆ ಹತ್ತು ಅಂಕೆಗಳಲ್ಲಿ, ಇಲ್ಲದ ಮೂರು ಕೊನೆಗಳು ಇವೆ. ಮೂರು ಕೊನೆಗಳು ಅಥವಾ ಮೂರು ಕೊಂಬುಗಳು ಮೂರು ಆತ್ಮಗಳಿಗೆ ಗುರುತಾಗಿ ತಯಾರಾಗಿರುವವೆಂದು ಮೊದಲೆ ಹೇಳಿಕೊಂಡಿದ್ದೇವೆ. ಇದು ಮೂರರಲ್ಲಿನ ಪ್ರತ್ಯೇಕತೆ.




ಮೂರರ ನಂತರ ಇರುವ ನಾಲ್ಕನೆ ಅಂಕೆಗೆ ನಾಲ್ಕು ಕೊನೆಗಳು ಇವೆ. ನಾಲ್ಕು ಕೊನೆಗಳು ಇರುವುದು ಯಾವ ಅಕ್ಷರವು ಇಲ್ಲ. ಒಂದಕ್ಕು, ಎರಡಕ್ಕು ಎರಡು ಕೊನೆಗಳಿರುವಾಗ, ಮೂರಕ್ಕೆ ಮೂರು, ನಾಲ್ಕಕ್ಕೆ ನಾಲ್ಕು ಆಂಗ್ಲ ಭಾಷೆಯಲ್ಲಿ ಇವೆ. ನಾಲ್ಕು ಯೋಗಕ್ಕೆ ಗುರುತಾಗಿ ಇದೆ.




ನಾಲ್ಕರ ನಂತರ ಐದು ಅಂಕೆಯನ್ನು ಗಮನಿಸಿದರೇ ಅದಕ್ಕೂ ಸಹ ಮೇಲೆ ಹಿಂದಕ್ಕೆ ಒಂದು ಕೊನೆ, ಕೆಳಗೆ ಮುಂದಕ್ಕೆ ಮತ್ತೊಂದು ಕೊನೆ ಒಟ್ಟು ಎರಡು ಕೊನೆಗಳು ಇವೆ.




ಐದರ ನಂತರ ಆರು ಅಂಕೆ ಇದೆ. ಆರು ಅಂಕೆಗೆ ಒಂದು ಕೊನೆ ಮಾತ್ರ ಇದೆ. ಆಂಗ್ಲಭಾಷೆಯಲ್ಲಿನ ಆರು ಅಂಕೆಯೂ ಸಹ ತೆಲುಗು ಭಾಷೆಯಲ್ಲಿನ ಆರನ್ನನುಸರಿಸಿ ತಯಾರು ಮಾಡಿಕೊಂಡಿರುವುದೇ ಎಂದು ನೆನಪಲ್ಲಿಟ್ಟುಕೊಳ್ಳಬೇಕು. ಆಂಗ್ಲಭಾಷೆಯಲ್ಲಿನ ಒಟ್ಟು ಹತ್ತು ಅಂಕೆಗಳಲ್ಲಿ ಆರಕ್ಕು, ಒಂಬತ್ತಕ್ಕು ಮಾತ್ರ ಒಂದೆ ಕೊನೆ ಇದೆ.




ಆರರ ನಂತರ ಏಳು ಅಂಕೆ ಇದೆ. ಏಳನ್ನು ಗಮನಿಸಿದರೆ ಇದಕ್ಕೂ ಸಹ ಎರಡು ಕೊನೆಗಳು ಇವೆ. 1,2,5 ನಂತರ 7 ಅಂಕೆಗೆ ಎರಡು ಕೊನೆಗಳು ಇವೆ. ಆಂಗ್ಲಭಾಷೆಯಲ್ಲಿ ಎರಡು ಕೊನೆಗಳು ಇರುವವು ಒಟ್ಟು ನಾಲ್ಕು ಅಂಕೆಗಳಿವೆಯೆಂದು ತಿಳಿಯುತ್ತಿದೆ.

8

ಎಂಟು ಅಂಕೆಗೆ ಸೊನ್ನೆಯಹಾಗೆ ಕೊಂಬುಗಳು ಒಂದೂ ಸಹ ಇಲ್ಲ. ಎರಡು ಸೊನ್ನೆಗಳ ಆಕಾರದಿಂದ ಎಂಟು ಕಾಣಿಸುತ್ತಿರುತ್ತದೆ. ಸೊನ್ನೆಗೆ ಎರಡು ಕೊನೆಗಳು ಕಲೆತುಹೋಗಿ ಒಂದು ಕೊನೆ ಸಹ ಇಲ್ಲದಂತೆ, ಎಂಟಕ್ಕೂ ಸಹ ಎರಡು ಸೊನ್ನೆಗಳು ಇರುವುದರಿಂದ ಕೊಂಬುಗಳು ಇಲ್ಲ.

9
1

ಎಂಟರ ನಂತರ ಒಂಬತ್ತು ಅಂಕೆ ಇದೆ. ಇದು ಆರನ್ನು ಮೇಲಕ್ಕೆ ತಿರುಗಿಸಿದರೆ ಒಂಬತ್ತಿನಂತೆ ಕಾಣಿಸುತ್ತದೆ. ಆರುವೊಂದರ ಕೊಂಬು ಮೇಲೆಕ್ಕಿದ್ದರೆ, ಒಂಬತ್ತು ವೊಂದರ ಕೊಂಬು ಕೆಳಕ್ಕೆ ಇರುತ್ತದೆ. ಆಂಗ್ಲಭಾಷೆಯಲ್ಲಿ ಒಂದೇ ಒಂದು ಕೊಂಬು ಇರುವವು ಆರು, ಒಂಬತ್ತು ಮಾತ್ರ ಇವೆ. ಮೂರು ಕೊಂಬುಗಳಿರುವ ಮೂರಿನಂತಾಗಲೀ, ಒಂದು ಕೊಂಬು ಇರುವ ಆರು ಒಂಬತ್ತಿನಂತೆ ಇತರ ಅಂಕೆಗಳು ಇಲ್ಲ. ಆದ್ದರಿಂದ 6, 9 ಇಂಗ್ಲೀಷು ಭಾಷೆಯಲ್ಲಿದ್ದರೂ ತೆಲುಗು ಭಾಷೆ ವಾಸನೆಯೊಂದಿಗೆ ತಯಾರಾದ ಅಂಕೆಗಳು ಆದ್ದರಿಂದ ಅಲ್ಲಿಯೂ ಸಹ ತೆಲುಗು ಭಾಷೆಯಲ್ಲಿರುವಂತೆ ಪ್ರತ್ಯೇಕತೆ 3,6,9 ಅಂಕೆಗಳಲ್ಲಿ ಕಾಣಿಸುತ್ತಿದೆ. ತೆಲುಗುನಲ್ಲಿ ಈ ಮೂರು ಅಂಕೆಗಳು ಹೇಗೆ ಇವೆಯೋ ಈಗ ಗಮನಿಸೋಣ.

ಈಶ್ವರ ಲಿಂಗದ ಮೇಲಿರುವ ಮೂರು ಆತ್ಮಗಳ ಗುರುತುಗಳಾದ ಮೂರು ವಿಭೂತಿ ರೇಖೆಗಳನ್ನು ಒಂದರೊಂದಿಗೆ ಒಂದು ಸೇರಿಸಿದಾಗ ಮೂರು ಅಂಕೆ ತಯಾರಾಗಿದೆಯೆಂದು ಹೇಳಿಕೊಂಡಿದ್ದೇವಲ್ಲವೆ! ಮೂರು ಅಂಕೆಯಲ್ಲಿ ನಾವು ನೋಡಿದರೆ ಎಡಗಡೆಗೆ ಮೂರು ಕೊನೆಗಳಿರುವಾಗ, ಬಲಗಡೆಗೆ ಮೂರು

ಕೊನೆಗಳು ಒಂದರೊಂದಿಗೆ ಸೇರಿಹೋದ ಹಾಗೆ ಎರಡು ಅನುಸಂಧಾನಗಳು ಇವೆ. ಎಡಗಡೆಗೆ ಪ್ರಪಂಚ ಸಂಬಂಧವೆಂದು ಹಾಗೇ ಬಲಗಡೆಗೆ ದೈವ ಸಂಬಂಧವೆಂದು ಹೇಳುತ್ತಿದ್ದೇವೆ. ಪ್ರತಿ ಮನುಷ್ಯನಲ್ಲೂ ಬಲಗಡೆ ಪ್ರಕೃತಿ ಸಂಬಂಧವೂ, ಎಡಕಡೆ ದೈವ ಸಂಬಂಧವಿದೆಯೆಂದು ಭಗವದ್ಗೀತೆ ಅಕ್ಷರ ಪರಬ್ರಹ್ಮ ಯೋಗದಲ್ಲಿ ಜೀವಿಯು ಮೋಕ್ಷದ ಕಡೆಗೆ ಹೋಗಬೇಕೆಂದರೆ ಕಾಲ, ಕರ್ಮ‌ಚಕ್ರಗಳಲ್ಲಿ ಎಡಗಡೆಗೇ ಹೋಗಬೇಕೆಂದು ಹೇಳಿಕೊಂಡಿದ್ದೇವೆ. ಆದ್ದರಿಂದ ಮೂರು ತಯಾರಾದ ವಿಧಾನದಲ್ಲಿಯೂ ಸಹ ಮೂರು ರೇಖೆಗಳು ಬಲಗಡೆ ತನ್ನ ಕೊನೆಗಳನ್ನು ತೋರಿಸುತ್ತಾ ಅದು ಪ್ರಪಂಚ ಸಂಬಂಧ ಜೀವಿಯ ಗುರುತಾಗಿ ಲೆಕ್ಕಿಸುವಹಾಗೆ ಮಾಡಿವೆ. ಇಲ್ಲಿ ಯಾರೂ ತಪ್ಪಾಗಿ ಅರ್ಥಮಾಡಿಕೊಳ್ಳಬಾರದೆಂದು ಹೇಳುವುದೇನೆಂದರೆ ನಾವು ನೋಡುವುದಕ್ಕೆ ಎಡಗಡೆಗೆ ಮೂರು ಕೊಂಬುಗಳು ಕಾಣಿಸಿದರೂ, ಮೂರಕ್ಕೆ ಮಾತ್ರ ಬಲಗಡೆ ಇವೆಯೆಂದು ನೆನಪಲ್ಲಿಟ್ಟುಕೊಳ್ಳಬೇಕು. ಒಬ್ಬ ಮನುಷ್ಯನನ್ನು (ಜೀವಿಯನ್ನು) ಮೂರಾಗಿ ಲೆಕ್ಕಿಸಿದರೆ ಆತನ ಧ್ಯಾಸ ಎಲ್ಲವೂ ಪ್ರಪಂಚದ ಕಡೆ ಇರುವುದರಿಂದ, ಜೀವಿಯ ಗುರುತಾಗಿರುವ ಮೂರರ ಅಂಕೆ ವೊಂದರ ಕೊನೆಗಳು ಸಹ ಮೂರಕ್ಕೆ ಬಲಗಡೆಗೇ ಇರುವಹಾಗೆ ತೋರಿಸಲಾಗಿದೆ. ಎದುರುಗಡೆ ನೋಡುವ ನಮಗೆ ಎಡಗಡೆಗಿರುವಂತೆ ಕಾಣಿಸಿದರೂ ಮೂರು ರೇಖೆಗಳ ಕೊನೆಗಳು ಅದಕ್ಕೆ ಬಲಗಡೆಗೇ ಇವೆ.

ಮೂರು ರೇಖೆಗಳ ಕೊನೆಗಳನ್ನು ಅದಕ್ಕೆ ಎಡಗಡೆಯಾಗಿ ತೋರಿಸಿದರೆ ಆಗ ಜೀವಿಯ ಧ್ಯಾಸ ದೈವ ಸಂಬಂಧವಾಗಿದೆಯೆಂಬ ಭಾವನೆ. ಆದ್ದರಿಂದ ಪ್ರಪಂಚ ಸಂಬಂಧ ಧ್ಯಾಸ ಇಲ್ಲದ ಮನುಷ್ಯ ಆತ್ಮ ಧ್ಯಾಸದಲ್ಲಿರುತ್ತಾನೆಂದು ತಿಳಿಸುವುದಕ್ಕೆ ಮೂರರ ಕೊನೆಗಳನ್ನು ತಿರುಗಿಸಿ ಎಡಗಡೆ ತೋರಿಸಿದರೆ ಆಗ ಜೀವಿಯ ಧ್ಯಾಸ ದೈವ ಸಂಬಂಧವಾಗಿ ಇದೆಯೆಂದು ತಿಳಿಯುತ್ತದೆ. ಆದರೆ ಇಲ್ಲಿ ದೈವ ಸಂಬಂಧವೆಂದರೆ! ಜೀವಿಗಿಂತಲೂ ದೊಡ್ಡದಾಗಿರುವ ಆತ್ಮ ಮೇಲೆನಾ? ಅಥವಾ ಜೀವಿಗಿಂತಲೂ ಮತ್ತು ಅತ್ಮಗಿಂತ ದೊಡ್ಡದಾದ ಪರಮಾತ್ಮ ಮೇಲೆನಾ? ಎಂದು ಪ್ರಶ್ನೆ ಬರಬಲ್ಲದು. ಆ ವಿಷಯ ಪೂರ್ತಿಯಾಗಿ

ತಿಳಿಯುವುದಕ್ಕೆ ನಮ್ಮ ಹಿರಿಯರು ಆತ್ಮಕ್ಕೆ ಒಂದು ಗುರುತು, ಪರಮಾತ್ಮಕ್ಕೆ ಒಂದು ಗುರುತನ್ನು ಇಟ್ಟಿದ್ದಾರೆ. ಹೇಗಾದರೆ ಜೀವಾತ್ಮನಿಗೆ ಗುರುತಾಗಿ ಮೂರು ರೇಖೆಗಳ ಕೊನೆಗಳನ್ನು ಬಲಗಡೆಗೆ ತೋರಿಸಿದ್ದಾರೋ, ಹಾಗೇ ಆತ್ಮಕ್ಕೆ ಗುರುತಾಗಿ ರೇಖೆಗಳನ್ನು ಎಡಗಡೆಗೆ ತೋರಿಸಿದ್ದಾರೆ. ಎಡಗಡೆಗೆ ತೋರಿಸುವುದರಿಂದ ದೈವ ಸಂಬಂಧವೆಂದು ತಿಳಿದರೂ, ಇದು ಆತ್ಮಕ್ಕೆ ಗುರುತು ಎನ್ನುವ ಹಾಗೆ ಎಡಗಡೆ ತೋರಿಸುವ ಮೂರು ರೇಖೆಗಳ ಕೊನೆಗಳಲ್ಲಿ ಕೆಳಗಿನ ಕೊನೆಯನ್ನು ಮೇಲೆ ಎರಡು ಕೊನೆಗಳಿಗಿಂತ ಸ್ವಲ್ಪ ಉದ್ದ ಮಾಡಿ ಪ್ರತ್ಯೇಕವಾಗಿ ತೋರಿಸುವುದು ನಡೆದಿದೆ. ಹಾಗೆ ಕೆಳಗಿನ ಕೊನೆ ಉದ್ದವಾಗಿರುವುದರಿಂದ ಅದು ಆತ್ಮ ಗುರುತೆಂದು ಎಲ್ಲರಿಗೂ ತಿಳಿದುಹೋಗಿದೆ. ಜೀವಿಗೆ ಗಣಿತಶಾಸ್ತ್ರದಲ್ಲಿ ಮೂರು ಅಂಕೆ ಗುರುತಾಗಿ ಇರುವುದರಿಂದ, ಆತ್ಮಕ್ಕೆ ಗುರುತಾಗಿ ಕೆಳಗಿನ ಕೊನೆ ಉದ್ದವಾಗಿ ಇರುವ ಆಕಾರವನ್ನು ತೋರಿಸುತ್ತಾ, ಅದಕ್ಕೆ ಆರು ಎಂದು ಹೆಸರು ಇಡುವುದು ನಡೆದಿದೆ. ಇದರಿಂದ ಆತ್ಮಕ್ಕೆ ಗುರುತು ಆರು ಎಂದೂ, ಜೀವಾತ್ಮನಿಗೆ ಗುರುತು ಮೂರು ಎಂದು ತಿಳಿದುಹೋಗಿದೆ. ಆತ್ಮಕ್ಕೆ ಗುರುತಾದ ಆರರ ಆಕಾರ ಹೇಗಿದೆಯೋ ಕೆಳಗಿನ ಚಿತ್ರಪಟದಲ್ಲಿ ನೋಡೋಣ.




**ಆತ್ಮಕ್ಕೆ ಗುರುತು**
**ಆರು.**
**6**

ಜೀವಾತ್ಮಕ್ಕೆ ಬಲಗಡೆಗೆ ಮೂರು ಕೊನೆಗಳಿರುವುದೇ ಅಲ್ಲದೆ, ಮೂರು ಕೊನೆಗಳು ಸಮಾನವಾಗಿ ಇರುವಹಾಗೆ ನಾವು ಮೂರೆನ್ನುವ ಅಂಕೆಯನ್ನು

ನೋಡಿದ್ದೇವೆ. ಆತ್ಮಕ್ಕೆ ಗುರುತಾದ ಆರು ಅಂಕೆಯಲ್ಲಿ ಸಹ ಮೂರು ಕೊನೆಗಳು ಮೂರು ಆತ್ಮಗಳಿಗೆ ಗುರುತಾಗಿ ಇದ್ದರೂ, ಮೂರು ಕೊನೆಗಳು ಎಡಗಡೆಗೆ ಇರುವುದೂ, ಅದರಲ್ಲಿ ಕೆಳಗಿನ ಕೊನೆ ಪ್ರತ್ಯೇಕವಾಗಿ ಉಳಿದ ಎರಡು ಕೊನೆಗಳಿಗಿಂತ ಉದ್ದವಾಗಿ ಇರುವುದನ್ನು ಗಮನಿಸಬಹುದು. ಈ ವಿಧವಾಗಿ ತೆಲುಗು ಭಾಷೆಯಲ್ಲಿ ಆರನ್ನು ತಯಾರು ಮಾಡಲಾಗಿದೆ. ಕೆಳಗಿನ ಕೊನೆ ಜೀವಾತ್ಮ ರೇಖೆಯಾಗಿ ಹೇಳಿಕೊಂಡಿದ್ದೇವೆ. ಮೂರು ಕೊನೆಗಳನ್ನು ಎಡಗಡೆಗೆ ತೋರಿಸುವುದರಲ್ಲಿ ಜೀವಾತ್ಮನಿಗೆ ದೈವ ಧ್ಯಾಸ ಉಂಟಾಗಿದೆಯೆಂದು ತಿಳಿಯಬಹುದು. ಜೀವಾತ್ಮ ರೇಖೆಯನ್ನು ಉದ್ದವಾಗಿ ಇಡುವುದರಿಂದ ಜೀವಾತ್ಮನಿಗೆ ಆತ್ಮ ಧ್ಯಾಸ ಉಂಟಾಗಿದೆಯೆಂದು ಹೇಳಬಹುದು. ಆದ್ದರಿಂದ ಎಡಗಡೆ ಕೆಳಗೆ ಉದ್ದವಾಗಿರುವ ರೇಖೆಯನ್ನು ನೋಡಿ ಅದನ್ನು ಆತ್ಮ ಗುರುತಾಗಿ ಹೇಳಬಹುದು. ಆತ್ಮ ಗುರುತು ಆರು ಎಂದು ಸಹ ತಿಳಿಯಬಹುದು. ಜೀವಾತ್ಮ ಗುರುತು ಮೂರು ಎಂದು, ಆತ್ಮ ಗುರುತು ಆರು ಎಂದು ತಿಳಿದಾಗ, ಪರಮಾತ್ಮ ಗುರುತು ಯಾವುದೆಂದು ಪ್ರಶ್ನೆ ಬರಬಹುದು. ಆದ್ದರಿಂದ ಅದಕ್ಕೆ ಉತ್ತರವಾಗಿ ಜೀವಾತ್ಮ ಆತ್ಮ ಪರಮಾತ್ಮ ಗುರುತುಗಳಿಂದಲೇ ಪರಮಾತ್ಮ ಗುರುತಾಗಿ ಒಂಬತ್ತನ್ನು ತಯಾರು ಮಾಡಿದ್ದಾರೆ. ಪರಮಾತ್ಮ ಗುರುತಾದ ಒಂಬತ್ತು ತಯಾರಾದ ವಿಧಾನವನ್ನು ಗಮನಿಸಿದರೆ, ಎಡಗಡೆ ಕೊನೆಗಳನ್ನು ತೋರಿಸುತ್ತಾ, ಕೆಳಗಿನ ಕೊನೆ ಉದ್ದವಾಗಿ ಇಟ್ಟರೆ ಅದು ಆತ್ಮಕ್ಕೆ ಗುರುತೆಂದು, ಅದನ್ನೇ ಆರು ಎಂದು ಹೇಳಿಕೊಂಡಿದ್ದೇವೆ ಅಲ್ಲವೆ! ಈಗ ಕೆಳಗಡೆಗಿರುವ ಕೊನೆಯನ್ನು ಉದ್ದ ಮಾಡದಂತೆ ಮಧ್ಯೆ ಕೊನೆ ಇರುವಹಾಗೆ ಇರಿಸಿ, ಮೇಲಿರುವ ಪರಮಾತ್ಮ ಗುರುತಾಗಿರುವ ರೇಖೆಯನ್ನು ಉದ್ದವಾಗಿ ಇಡುವುದರಿಂದ, ಅದು ಪ್ರತ್ಯೇಕವಾದ ಗುರುತಾಗಿ ತಯಾರಾಗಿದೆ. ಹಾಗೆ ತಯಾರಾದ ಗುರುತನ್ನೇ ಪರಮಾತ್ಮ ಗುರುತೆಂದೂ, ಅದೇ ಒಂಬತ್ತು ಅಂಕೆಯಾಗಿ ಇದೆಯೆಂದು ನಮ್ಮ ಹಿರಿಯರು ಹೇಳಲಾಗಿದೆ. ಒಂಬತ್ತು ವೊಂದರ ಆಕಾರವನ್ನು ಪಕ್ಕದ ಪೇಜಿ ಚಿತ್ರಪಟದಲ್ಲಿ ಹೇಗಿದೆಯೋ ಗಮನಿಸೋಣ.




**ಪರಮಾತ್ಮಕ್ಕೆ ಗುರುತು ಒಂಬತ್ತು.**

**9**

ತೆಲುಗು ಭಾಷೆ ದೈವಜ್ಞಾನಕ್ಕೆ ಪೂರ್ತಿ ಹತ್ತಿರವಾಗಿ ಇದೆಯೆಂದು ಹೇಳಿಕೊಂಡಿದ್ದೇವೆ. ಅದರ ಪ್ರಕಾರವೇ ತೆಲುಗು ಅಂಕೆಗಳನ್ನು ಸಹ ತಯಾರು ಮಾಡಲಾಗಿದೆ. ನಾವು ಈಗ ಪ್ರತ್ಯೇಕಿಸಿ ಮೂರು, ಆರು, ಒಂಬತ್ತನ್ನು ಕುರಿತೇ ಹೇಳಿಕೊಳ್ಳುತ್ತಿದ್ದೇವೆ. ಈಗ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ! ಬಲಗಡೆ ತೋರಿಸಿದಾಗ ಮೂರು ಕೊನೆಗಳು ಸಮಾನವಾಗಿ ಇಟ್ಟು ಅದನ್ನೇನೋ ಜೀವಾತ್ಮನ ಗುರುತೆಂದು, ಹಾಗೆ ಮೂರು ಎಂದು ಹೇಳಿದ್ದೀರ. ಆರು ವಿಷಯದಲ್ಲಿ ಹೇಳಿದಾಗ ಎಡಗಡೆ ಕೊನೆಗಳನ್ನು ತೋರಿಸುತ್ತಾ ಜೀವಾತ್ಮನ ಕೊನೆಯನ್ನು ಉದ್ದಮಾಡಿ, ಇದು ಆತ್ಮಕ್ಕೆ ಗುರುತೆಂದು ಅದನ್ನೇ ಆರುಎಂದು ಹೇಳಿದ್ದೀರ. ಪರಮಾತ್ಮ ವಿಷಯದಲ್ಲಿ ಮೇಲಿನ ಕೊಂಬನ್ನು (ಕೊನೆಯನ್ನು) ಉದ್ದಮಾಡಿ ಪರಮಾತ್ಮ ಗುರುತಾಗಿ ಹೇಳಿದ್ದೀರ. ಆತ್ಮ ವಿಷಯದಲ್ಲಿ ಮಧ್ಯ ರೇಖೆಯನ್ನು ಉದ್ದವಾಗಿ ತೋರಿಸಬಹುದಲ್ಲವೆ! ಆತ್ಮಕ್ಕೆ ಗುರುತಾಗಿರುವ ಮಧ್ಯೆ ರೇಖೆಯನ್ನು ಬಿಟ್ಟು ಕೆಳಗೆ ಜೀವಾತ್ಮ ರೇಖೆಯನ್ನು ಉದ್ದ ಮಾಡಿ ಆತ್ಮ ಗುರುತು ಆರು ಎಂದು ಹೇಳಿದ್ದೀರ ಹಾಗೆ ಏಕೆ ಹೇಳಿದ್ದೀರ? ಮಧ್ಯೆ ರೇಖೆಯನ್ನು ಉದ್ದ ಮಾಡಿ ಏಕೆ ತೋರಿಸಲಿಲ್ಲ? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಹೀಗೆ ಇದೆ.

ಜಗತ್ತಿನಲ್ಲಿ ಪ್ರತಿ ಮನುಷ್ಯನಲ್ಲಿಯೂ ಮೂರು ಆತ್ಮಗಳಿದ್ದರೂ ಬಹಳ ಜನರಿಗೆ ತಿಳಿದಿರುವವು ಜೀವಿಯು, ದೇವರು ಎನ್ನುವ ಜೀವಾತ್ಮ, ಪರಮಾತ್ಮ

ಮಾತ್ರವೇ. ಆತ್ಮ ಎನ್ನುವುದು ಮಾತುಗಳ ಸಂದರ್ಭದಲ್ಲಿ ಹೇಳುತ್ತಿದ್ದರೂ ಅದು ಮಾತ್ರ ಯಾರಿಗೂ ತಿಳಿದಿಲ್ಲ. ಅಷ್ಟೇ ಅಲ್ಲದೆ ಮನುಷ್ಯ ಹುಟ್ಟಿದಾಗಿನಿಂದ ಸಾಯುವವರೆಗು ಎಲ್ಲ ಕಾರ್ಯಗಳನ್ನು ಆತ್ಮವೇ ಮಾಡುತ್ತಿದೆ. ಈಕಡೆ ಜೀವಿಯಾದವನಾಗಲೀ, ದೇವರಾಗಲಿ ಯಾವುದು ಮಾಡಲಿಲ್ಲ. ಪ್ರಪಂಚದಲ್ಲಿನ ಎಲ್ಲ ಕಾರ್ಯಗಳನ್ನು ಎಲ್ಲರಿಂದ ಮಾಡಿಸುವುದು ಆತ್ಮವೇ ಆದರೂ ಆತ್ಮ ಮಾತ್ರ ಯಾರಿಗೂ ತಿಳಿದಿಲ್ಲ. ಆತ್ಮ ಅತ್ಯಂತ ಗುಪ್ತವಾದದ್ದು. ಎಲ್ಲ ಕೆಲಸಗಳನ್ನು ಪ್ರತ್ಯಕ್ಷವಾಗಿ ಮಾಡುತ್ತಿದ್ದರೂ, ಯಾರಿಗೂ ತಿಳಿಯದಂತೆ ವಿಚಿತ್ರವಾಗಿ ಶರೀರದಲ್ಲೇ ಇರುವದರಿಂದ, ಆತ್ಮವನ್ನು ಚಿತ್ರಗುಪ್ತನು ಎಂದು ಕರೆಯುತ್ತಿದ್ದೇವೆ. ಪ್ರಪಂಚದಲ್ಲಿ ಎಲ್ಲದಕ್ಕಿಂತ ರಹಸ್ಯವಾಗಿರುವುದು ಆತ್ಮವೇ ಆಗಿರುವುದರಿಂದ, ರಹಸ್ಯವಾಗಿ ಶರೀರದಲ್ಲಿ ಯಾರಿಗೂ ತಿಳಿಯದಂತೆ ಇರುವುದರಿಂದ, ಅದನ್ನು ಜ್ಞಾನದ ಪ್ರಕಾರ ಗುರುತಿಸಿ ತೋರಿಸಲಿಲ್ಲ. ಅದು ರಹಸ್ಯವಾದದ್ದೆಂದು ತಿಳಿಸುವ ಸಲುವಾಗಿ ಆತ್ಮವೊಂದರ ಗುರುತಾದ ಮಧ್ಯ ರೇಖೆಯನ್ನು ಉದ್ದ ಮಾಡಿ ತೋರಿಸಲಿಲ್ಲ. ಜೀವಾತ್ಮ ಪರಮಾತ್ಮ ಎನ್ನುವ ಎರಡು ಆತ್ಮಗಳ ಮಧ್ಯದಲ್ಲಿ ಅತ್ಮ ಇರುವಹಾಗೆ ವಿಭೂತಿ ರೇಖೆಗಳಲ್ಲಿ ಗುರುತಿಸಿದರೂ, ಆರು ಸಂಖ್ಯೆಯಲ್ಲಿ ಜೀವಾತ್ಮ ಗುರುತನ್ನೇ ಉದ್ದ ಮಾಡಿ ತೋರಿಸಿ ಅದನ್ನು ಆತ್ಮ ಗುರುತಾಗಿ ಹೇಳಿದ್ದೇವೆ. ಆರು ಗುರುತಾಗಿರುವ ಅಂಕೆಯನ್ನು ತಿರುಗಿಸಿಟ್ಟರೆ ಅದೇ ಒಂಬತ್ತಾಗಿ ಇದೆ. ತೆಲುಗುನಲ್ಲಿ ಮಾಡಿದ ಪ್ರಯೋಗವೇ ಇಂಗ್ಲೀಷು ಭಾಷೆಯಲ್ಲಿನ ಆರನ್ನು ತಿರುಗಿಸಿ ಒಂಬತ್ತಾಗಿ ಹೇಳಿಕೊಳ್ಳುತ್ತಿದ್ದಾರೆ. ಮೂರು ಕೊಂಬುಗಳು ಇರುವ ಒಂದೇ ಒಂದು ಗುರುತೇ ಮೂರು, ಆರು, ಒಂಬತ್ತಾಗಿ ಇರುವಹಾಗೆ, ಅದು ಜ್ಞಾನ ಅರ್ಥದಿಂದ ಕೂಡಿಕೊಂಡಿರುವಹಾಗೆ, ಮೊದಲು ಹಿರಿಯರು ತೆಲುಗು ಭಾಷೆಯಲ್ಲಿ ತಯಾರುಮಾಡಿದ್ದಾರೆಂದು ಎಲ್ಲರೂ ತಿಳಿಯಬೇಕು.

ಸೃಷ್ಠಿ ಇಲ್ಲದಿರುವಾಗ ಒಬ್ಬನೇ ಆದ ದೇವರು ಸೃಷ್ಠಿಯಲ್ಲಿ ಜಗತ್ತನ್ನು ತಯಾರುಮಾಡಿದ್ದಾನೆ. ಜಗನ್ನಾಟಕಕ್ಕೆ ಸೂತ್ರಧಾರಿಯಾದ ದೇವರು ತನ್ನಿಂದ ತಾನು ತಯಾರಿಸಿದ ಜಗತ್ತಲ್ಲಿನ ನಾಟಕಕ್ಕೆ ತಾನೇ ಹೀರೋ (ಕಥಾನಾಯಕನು)

ಆಗಿದ್ದೂ ಕಥೆ ನಡೆಯುವುದಕ್ಕೆ ಅಥವಾ ಆಟ ಸಾಗುವುದಕ್ಕೆ ಒಬ್ಬ ವಿಲನ್‌ನ್ನು (ವಿರೋಧಿಯನ್ನು) ತಯಾರು ಮಾಡಿದ್ದಾನೆ. ಹೀರೋನನ್ನು ಪರಮಾತ್ಮ ಎಂದು ಕರೆಯುವಾಗ, ವಿಲನ್‌ನ್ನು ಮಾಯೆ ಎಂದು ಕರೆಯುತ್ತಿದ್ದೇವೆ. ಈ ಜಗನ್ನಾಟಕ ಕಥೆಯಲ್ಲಿ ವಿಲನ್ ಯಾವಾಗಲೂ ಹೀರೋನ್ನ ಮೀರಿ ಹೋಗಬೇಕೆಂದು, ತಾನೇ ಹೀರೋಆಗಿ ಹೆಸರು ತಂದುಕೊಳ್ಳಬೇಕೆಂದು ಪ್ರಯತ್ನಿಸುತ್ತಿರುವನು. ಜಗನ್ನಾಟಕದಲ್ಲಿನ ಜೀವಿಗಳನ್ನು ಹೀರೋ ಆದ ದೇವರ ಸುತ್ತಲೂ ಸೇರದಂತೆ ತನ್ನ ಸುತ್ತಾ ಸೇರುವುದಕ್ಕೆ, ತನ್ನ ನಾಯಕತ್ವವನ್ನೇ ಜೀವಿಗಳು ಒಪ್ಪಿಕೊಳ್ಳುವುದಕ್ಕೆ ಜೀವಿಗಳನ್ನು ಮೋಸಮಾಡಿ ತಾನೇ ಹೀರೋ ಎನಿಸಿಕೊಳ್ಳುವ ಪ್ರಯತ್ನ ಮಾಡುತ್ತಿರುವುದು. ಅಂತಹ ಪ್ರಯತ್ನದಲ್ಲಿ ತಾನು ಸುಲಭವಾಗಿ ಹೀರೋ ಹಾಗೆ ಚಲಾವಣೆ ಆಗುವುದಕ್ಕೆ ವಿಲನ್ ಹೀರೋ ವೇಷ ಹಾಕಿಕೊಂಡು ಹೀರೋ ಹಾಗೇ ನಟಿಸುವುದಕ್ಕೆ ಪ್ರಾರಂಭಿಸಿದ್ದಾನೆ. ಅಂದರೆ ಮಾಯೆ ದೇವರ ಹಾಗೆ ತನ್ನ ರೂಪವನ್ನು ಬದಲಾಯಿಸಿಕೊಂಡು ತಾನೇ ದೇವರೆನ್ನುವ ಹಾಗೆ ಜೀವಿಗಳನ್ನು ನಂಬಿಸುವುದಕ್ಕೆ ಪ್ರಾರಂಭಿಸಿದೆ. ಆದ್ದರಿಂದ ಕಥಾನಾಯಕನಾದ (ಹೀರೋ ಆದ) ದೇವರಿಗೆ, ವಿರೋಧಿ (ವಿಲನ್) ಆದ ಮಾಯೆ ಜಗತಿಯಲ್ಲಿ ತಾನೇ ದೇವರೆನಿಸುವಹಾಗೆ ದೇವರ ಜ್ಞಾನವೆಂದು ಹೇಳಿಕೊಳ್ಳುವ ಪ್ರತಿಯೊಂದುಕಡೆ ದೇವರ ಜ್ಞಾನದಂತೆ ತನ್ನ ಜ್ಞಾನವನ್ನು ಹೇಳಿಸಿದೆ. ಮುಖ್ಯವಾಗಿ ಪ್ರಜೆಗಳಿಗೆ ಬೋಧಿಸುವ ಬೋಧಕರಾಗಿರುವ ಅವರ ತಲೆಯಲ್ಲಿ ತೂರಿ ಪ್ರಜೆಗಳು ಗುರುತು ಹಿಡಿಯದ ಹಾಗೆ ತನ್ನ ಜ್ಞಾನವನ್ನು ಹೇಳಿಸುವುದಕ್ಕೆ ಪ್ರಾರಂಭಿಸಿದೆ. ದೊಡ್ಡ ದೊಡ್ಡ ಸ್ವಾಮೀಜಿಗಳು, ಇತರ ಮತಗಳಲ್ಲಿನ ಬೋಧಕರು, ಅನೇಕ ವಿಧಗಳ ಗುರುಗಳು ಹೇಳುತ್ತಿರುವುದು ದೇವರಿಗೆ ವಿರೋಧಿ ಆದ ಮಾಯೆ ಬೋಧನೆಗಳೆ ಎಂದು ಹೇಳಬಹುದು. ದೇವರ ಜ್ಞಾನವೇಯೆಂದು ನಂಬಿ ಮಾಯಾ ಜ್ಞಾನವನ್ನು ತಮ್ಮ ತಲೆಯಲ್ಲಿ ತುಂಬಿಕೊಂಡಿರುವವರು ದೇವರಿಗೆ ವಿರುದ್ಧವಾದ ಕೆಲಸಗಳನ್ನೇ ಮಾಡುತ್ತಿದ್ದಾರೆ, ಮಾಡಿಸುತ್ತಿದ್ದಾರೆ. ಸಣ್ಣ ಉದಾಹರಣೆಯನ್ನು ಹೇಳಿಕೊಂಡರೆ **ಭಗವದ್ಗೀತೆಯಲ್ಲಿ ದೇವರ ಪ್ರತಿನಿಧಿಯಾದ**

**ಭಗವಂತನೇ ವಿಶ್ವರೂಪ ಸಂದರ್ಶನ ಯೋಗವೆನ್ನುವ ಅಧ್ಯಾಯದಲ್ಲಿ ನನ್ನನ್ನು ಸೇರುವುದಕ್ಕಾಗಲಿ, ನನ್ನನ್ನು ತಿಳಿಯುವುದಕ್ಕಾಗಲಿ ವೇದಾಧ್ಯಯನಗಳು, ಯಜ್ಞಗಳು, ದಾನಗಳು, ತಪಸ್ಸುಗಳು ಕೆಲಸಕ್ಕೆ ಬರುವುದಿಲ್ಲವೆಂದು ಹೇಳಿದರೆ, ಬೋಧಕರ ಮಾಯೆ ಮಾತುಗಳು ಕೇಳಿ ಅದೇ ಜ್ಞಾನವೆಂದುಕೊಂಡವರೆಲ್ಲರೂ ಯಜ್ಞಗಳು ಮಾಡುತ್ತಿದ್ದಾರೆ, ಅದರಲ್ಲಿ ವೇದಪಠನಗಳು ಮಾಡುತ್ತಿದ್ದಾರೆ. ಹಾಗೇ ದಾನಗಳು ಮಾಡುತ್ತಿದ್ದಾರೆ, ಮೆಡಿಟೇಷನ್ ಎಂಬ ಹೆಸರಿಟ್ಟು ತಪಸ್ಸುಗಳು ಮಾಡುತ್ತಿದ್ದಾರೆ.** ಇದು ಹಿಂದೂ ಸಮಾಜದಲ್ಲಿನ ಕೆಲಸವಾದಾಗ, ಕ್ರೈಸ್ತ ಸಮಾಜದೊಳಗೆ ಹೋಗಿ ನೋಡಿದರೆ ಪರಿಶುದ್ಧ ಬೈಬಲ್‌ನಲ್ಲಿ ದೇವರ ಪ್ರತಿನಿಧಿಯಾದ ಯೇಸುಪ್ರಭುವೇ ಮತ್ತಾಯ ಸುವಾರ್ತೆ 23ನೇ ಅಧ್ಯಾಯ 9ನೇ ವಚನದಲ್ಲಿ **"ಭೂಮಿ ಮೇಲೆ ಯಾರಿಗಾದರೂ ತಂದೆ ಎಂದು ಹೆಸರು ಇಡಬೇಡ. ಒಬ್ಬನೇ ನಿಮ್ಮ ತಂದೆ, ಆತನು ಪರಲೋಕದಲ್ಲಿದ್ದಾನೆ"** ಎಂದು ಹೇಳಿದ್ದಾನೆ. ಪ್ರಭುವೇ ಹೇಳಿದ ಮಾತನ್ನು ಮೋಸಗೊಳಿಸಿ ಈದಿನ ಸಾತಾನ್ (ಮಾಯೆ) ಮನುಷ್ಯರಲ್ಲೇ ಬೋಧಕರನ್ನು ತಯಾರುಮಾಡಿ ಅವರನ್ನೇ ತಂದೆ ಎಂದು, ಫಾದರ್ ಎಂದು ಮನುಷ್ಯರಿಂದಲೇ ಕರೆಯಿಸುತ್ತಿದೆ. ಹೀಗೆ ಭಗವದ್ಗೀತೆಯಲ್ಲಿ ದೇವರು ಹೇಳಿದ ವಾಕ್ಯಕ್ಕೆ ವಿರುದ್ಧವಾಗಿ ಮಾನವರಿಂದ ಯಜ್ಞಗಳನ್ನು ಮಾಡಿಸುವ ಮಾಯೆ, ಕ್ರೈಸ್ತರಲ್ಲಿ ಮನುಷ್ಯರನ್ನೇ ಫಾದರ್ (ತಂದೆ) ಎಂದು ಕರೆಯುವಂತೆ ಮಾಡಿ ತಾನೇ ದೇವರಹಾಗೆ ಚಲಾವಣೆ ಆಗುತ್ತಿದೆ. ಹೀಗೆ ಹೇಳುತ್ತಾ ಹೋದರೆ ಮಾಯೆ ದೇವರ ಸ್ಥಾನದಲ್ಲೇ ತಿಷ್ಟಹಾಕಿದೆ. ಅದಕ್ಕೆ ಆಧಾರವಾಗಿ ಒಂದು ವಿಷಯವನ್ನು ಹೇಳಿಕೊಳ್ಳೋಣ. ಬೈಬಲ್‌ನಲ್ಲಿ ಕಟ್ಟಕಡೆಯಲ್ಲಿ "ಪರಮಾರ್ಥ ಜ್ಞಾನಿಯಾದ ಯೋಹಾನನು ಬರೆದ ಪ್ರಕಟಣೆ ಗ್ರಂಥ" ಎನ್ನುವುದರಲ್ಲಿ 13ನೇ ಅಧ್ಯಾಯದಲ್ಲಿ 18ನೇ ವಾಕ್ಯ **"ಬುದ್ಧಿ ಇರುವವನು ಮೃಗವೊಂದರ ಸಂಖ್ಯೆಯನ್ನು ಲೆಕ್ಕಿಸಲಿ, ಅದು ಒಂದು ಮನುಷ್ಯನ ಸಂಖ್ಯೆಯೇ, ಆ ಸಂಖ್ಯೆ ಆರುನೂರಾ ಅರವತ್ತಾರು. ಇದರಲ್ಲಿ ಜ್ಞಾನವಿದೆ"** ಎಂದು ಇದೆ. 13ನೇ ಅಧ್ಯಾಯದಲ್ಲಿ ಒಟ್ಟು ಎಲ್ಲಾ ವಾಕ್ಯಗಳು ಓದಿ ನೋಡಿದರೆ ಮಾಯೆಯನ್ನು ಅಥವಾ ಸಾತಾನ್‌ನು ಮೃಗ ಎಂದಹಾಗೆ ತಿಳಿಯುತ್ತಿದೆ. ಈ ವಿಷಯ ಯೋಹಾನು

ಪ್ರಕಟಣೆ ಗ್ರಂಥ ಓದಿದ ಯಾರಿಗಾದರೂ ಅರ್ಥವಾಗಬಲ್ಲದು. ವಾಕ್ಯದಲ್ಲಿ ಇದು ಒಬ್ಬ ಮನುಷ್ಯನ ಸಂಖ್ಯೆಯೇ ಎಂದು ಇದೆ. ಮನುಷ್ಯ ಸಂಖ್ಯೆ ಎಂದು ಇದೆ ಆದರೇ ದೇವರ ಸಂಖ್ಯೆ ಎಂದು ಅಲ್ಲಿ ಇಲ್ಲವಲ್ಲ! ಸಾತಾನು (ಮಾಯೆ) ಮನುಷ್ಯನಲ್ಲಿ ಸುಲಭವಾಗಿ ಸೇರುತ್ತಿದೆ. ಆದ್ದರಿಂದ ಅಲ್ಲಿ ಮನುಷ್ಯನಲ್ಲಿ ಸೇರಿರುವ ಸಾತಾನ್ ಸಂಖ್ಯೆಯಾಗಿ ನಾವು ನೆನಪಿಟ್ಟುಕೊಳ್ಳಬೇಕು. ನಾವು ಮಾಯೆಕೋಡ್ ಹೇಳಿದಾಗಲೂ ಸಹ ಅಜ್ಞಾನಮನುಷ್ಯನನ್ನು ನೋಡಿದಾಗ ಮಾಯೆ ಸಂಖ್ಯೆಯನ್ನು ನೆನಪಿಟ್ಟುಕೊಳ್ಳಬೇಕೆಂದು ಮೊದಲೇ ಹೇಳಿದ್ದೇವೆ. ಯೋಹಾನು ಪ್ರಕಟಣೆ ವಾಕ್ಯದಲ್ಲಿ "ಬುದ್ಧಿಯಿರುವವನು ಮೃಗವೊಂದರ ಸಂಖ್ಯೆಯನ್ನು ಲೆಕ್ಕಿಸು" ಎಂದು ಇದೆಯಲ್ಲ! ಅದರಲ್ಲಿನ ವಿವರದ ಪ್ರಕಾರ ಬುದ್ಧಿ ಇರುವವನು ಎಂದು ಪ್ರತ್ಯೇಕವಾಗಿ ಹೇಳುವುದರಲ್ಲಿ ಜ್ಞಾನವಿರುವವನೆಂದು ಅರ್ಥವಾಗುತ್ತಿದೆ. ಜ್ಞಾನ ತಿಳಿದವನು ಅಜ್ಞಾನಿಯನ್ನು ನೋಡಿದಾಗ ಅವನಲ್ಲಿನ ಮಾಯೆಯನ್ನು 666 ಆಗಿ ಗುರುತಿಸುವನೆಂದು ಮೊದಲ ಪುಟಗಳಲ್ಲೇ ಹೇಳಿದ್ದೇವೆ. ನಂತರ ಅದೇ ವಾಕ್ಯದಲ್ಲಿ "ಇದರಲ್ಲಿ ಜ್ಞಾನವಿದೆ" ಎಂದು ಹೇಳಲಾಗಿದೆ. ಅದರ ವಿವರವನ್ನು ನೋಡಿದರೆ ಜ್ಞಾನ ಹೊಂದಿದವನು ಸಾಧಾರಣ ಮನುಷ್ಯನಲ್ಲಿನ ಮಾಯೆಯನ್ನು ಗುರುತಿಸಿ, ಮನುಷ್ಯ ಭಾವನೆ ಪ್ರಕಾರ ಒಳಗಿರುವ ಸಾತಾನು (ಮಾಯೆಯನ್ನು) 666 ಆಗಿ ಗುರುತಿಸುವುದು ಜ್ಞಾನ ಮಾರ್ಗದಲ್ಲಿ ಇರುವವರಿಗೇ ಸಾಧ್ಯವಾಗುತ್ತದೆಂದು, ಇತರರಿಗೆ ತಿಳಿಯುವಹಾಗೆ ಇದರಲ್ಲಿ ಜ್ಞಾನವಿದೆಯೆಂದು ಹೇಳಿದ್ದಾರೆ. ಇದೆಲ್ಲವನ್ನೂ ನೋಡಿದರೆ ದೇವರ ಜ್ಞಾನದ ಪ್ರಕಾರ ಜ್ಞಾನವಿರುವವನು ಜ್ಞಾನವಿಲ್ಲದವನ ತಲೆಯೊಳಗಿರುವ ಮಾಯೆಯನ್ನು ಕಂಡುಕೊಳ್ಳುವನೆಂದು ಇತರರಿಗೂ ಸಹ ಅರ್ಥವಾಗುತ್ತದೆ. ಎಷ್ಟೋ ಸ್ಪಷ್ಟವಾಗಿ ಸಾತಾನು ಸಂಖ್ಯೆ 666 ಎಂದು ಯೋಹಾನನ ವಾಕ್ಯದಲ್ಲಿ ಇರುವಾಗ, ನಾವು ಇದಕ್ಕೂ ಮೊದಲೆ ವಿಲನ್ ಹೀರೋನಾಗಿ ಚಲಾವಣೆ ಆಗುವನೆಂದು ಹೇಳಿಕೊಂಡಹಾಗೆ, ಮಾಯೆ ದೇವರಾಗಿ ಪ್ರಚಾರ ಮಾಡಿಕೊಳ್ಳುತ್ತಿದೆ. ಅದೇ ವಿಧವಾಗಿ ಸಾತಾನ್ ಒಳ್ಳೆಯ ಹೆಸರಿರುವ ಬೋಧಕನ ತಲೆಯಲ್ಲಿ ತೂರಿ ತನ್ನ ಸಂಖ್ಯೆಯನ್ನು ದೇವರ ಸಂಖ್ಯೆಯಾಗಿ ಪ್ರಕಟಿಸಿದೆ. ಸಣ್ಣ ಸಣ್ಣ ಬೋಧಕರಿಂದ ಹೇಳಿಸಿದರೆ ದೇವರ

ಭಕ್ತರಾದವರು ನಂಬುವುದಿಲ್ಲವೇನೋ ಎಂದು, ಯಾರಿಂದ ಹೇಳಿಸಿದರೆ ಚೆನ್ನಾಗಿರುತ್ತದೋ ಅವರನ್ನು ಆಯ್ಕೆ ಮಾಡಿಕೊಂಡು ಹೇಳಿಸುವುದರಿಂದ ಅಷ್ಟಿಲ್ಲದೇ ಅಷ್ಟು ದೊಡ್ಡಾತ ಹೇಳುತ್ತಾನಾ ಎಂದು ತಪ್ಪದೇ ನಂಬುವರೆಂದು ದೈವಜ್ಞಾನಿ, ಆತ್ಮಜ್ಞಾನಿ, ಜಯಶಾಲಿ ಎನ್ನುವ ಬಿರುದಾಂಕಿತಗಳಿರುವ ಬೋಧಕನಿಂದ "ಸೃಷ್ಟಿಕರ್ತ ಕೋಡ್ 666" ಎಂದು ಉಪನ್ಯಾಸಗಳಲ್ಲಿ ಹೇಳಿಸಿದೆ, ಗೋಡೆಗಳ ಮೇಲೆ ಬರೆಯಿಸಿದೆ. ಅದನ್ನು ನೋಡಿದ ಬಹಳ ಜನ ದೈವಭಕ್ತರು ದೊಡ್ಡ ದೈವಜ್ಞಾನಿ, ಆತ್ಮಜ್ಞಾನಿ ಆದ ವ್ಯಕ್ತಿ ಬರೆದ ಮಾತು ನಿಜವೇ ಆಗಿರುತ್ತದೆ, ಎಂದು ಪೂರ್ತಿಯಾಗಿ ನಂಬಿ ದೇವರ ಸಂಖ್ಯೆಯನ್ನು 666ಆಗಿ ಗುರುತಿಸಿ ಕೊಂಡು ಅವರೂ ಸಹ ಸಾತಾನು ಬಲೆಯಲ್ಲಿ ಸಿಲುಕಿಕೊಂಡು ಹೋಗಿದ್ದಾರೆ. ಇದು ದೇವರ ಸಂಖ್ಯೆ ಅಲ್ಲ ಸಾತಾನು ಸಂಖ್ಯೆಯೆಂದು ಯಾರೂ ಎದುರು ಹೇಳದೇ ಅದು ದೇವರ ಸಂಖ್ಯೆಯೇ ಆಗಿರುತ್ತದೆ, ದೇವರ ಸಂಖ್ಯೆ ಅಲ್ಲದಿದ್ದರೆ ಅಷ್ಟುದೊಡ್ಡ ಆತ್ಮಜ್ಞಾನಿ ಹಾಗೆ ಹೇಳುವನಾ ಎಂದು ಅಂದುಕೊಂಡಿದ್ದಾರೆ.

ಬೈಬಲ್‌ನ್ನು, ಭಗವದ್ಗೀತೆಯನ್ನು ಎರಡನ್ನೂ ಓದಿ ಅದರಲ್ಲಿನ ಜ್ಞಾನವನ್ನು ತಿಳಿದ ಕೆಲವರು ದೈವಭಕ್ತರು ತಮ್ಮ ಜ್ಞಾನದಿಂದ 666 ಎನ್ನುವ ಸಂಖ್ಯೆ ಈಕಡೆ ಗೀತೆಯಲ್ಲಿ ಮಾಯೆಗೆ ಗುರುತಾಗಿಯೇ ಕಾಣಿಸುತ್ತಿದೆ, ಆಕಡೆ ಬೈಬಲ್‌ನಲ್ಲಿ ಮಾಯೆ (ಸಾತಾನ್)ವೊಂದರ ಗುರುತಾಗಿಯೇ ತಿಳಿಯುತ್ತಿದೆ ಎಂದು ತಿಳಿದವರಾಗಿ ದೇವರ ಕೋಡ್ 666 ಎಂದು ಹೇಗೆ ಹೇಳಿದ್ದಾರೋ ವಿವರವನ್ನು ತಿಳಿದುಕೊಳ್ಳಬೇಕೆಂದುಕೊಂಡಿದ್ದಾರೆ. ಹಾಗೆ ಅಂದುಕೊಂಡವರು ದೇವರಕೋಡ್ 666 ಎಂದು ಬರೆದ ದೈವಜ್ಞಾನಿ, ಆತ್ಮಜ್ಞಾನಿಯಾದ ಅವರ ಮುಖ್ಯವಾದ ಶಿಷ್ಯನನ್ನು ಇದರ ವಿವರ ನಮಗೆ ಅರ್ಥವಾಗಲಿಲ್ಲ ನಮಗೆ ಅರ್ಥವಾಗುವಹಾಗೆ ವಿವರಿಸಿ ಹೇಳಿರೆಂದು ಕೇಳಿದಾಗ, ನೀವು ಬನ್ನಿ ನಾವು ವಿವರಿಸಿ ಹೇಳುತ್ತೇವೆ ಎಂದರು. ವಿವರವನ್ನು ಹೇಳಿಸಿಕೊಳ್ಳುವುದಕ್ಕೆ ಮೂವರು ಜ್ಞಾನಿಗಳು ಆತನ ಹತ್ತಿರಕ್ಕೆ ಹೋಗಿದ್ದಾರೆ. ಹೋದ ಮೂವರು ವಿನಯವಾಗಿ ಕೇಳುವುದು, ಕೇಳಿರುವುದಕ್ಕೆ ಎಷ್ಟೋ ತಾಳ್ಮೆಯಿಂದ ದೈವಜ್ಞಾನಿ ಅವರ ಶಿಷ್ಯನಾದ

ರಾಜು ಅವರು ವಿವರವಾಗಿ ಉತ್ತರವನ್ನುಕೊಡುವುದು ನಡೆದಿದೆ. ಅವರ ಮಧ್ಯೆ ನಡೆದ ಸಂಭಾಷಣೆಯನ್ನು ಕೆಳಗೆ ಬರೆಯುತ್ತಿದ್ದೇವೆ ನೋಡಿ. (ಗಮನಿಸಬೇಕಾದ ವಿಷಯವೆನೆಂದರೇ ಹೇಳುವುದನ್ನು ಕೇಳುವುದೇ ನಡೆದಿದೆ, ಆದರೇ ಹೋದ ಮೂರು ವ್ಯಕ್ತಿಗಳು ಎದುರು ಪ್ರಶ್ನೆಗಳನ್ನು ಹಾಕಿ ಹೇಳುವವನಿಗೆ ತೊಂದರೆ ಕೊಡಲಿಲ್ಲ.)

**ಜ್ಞಾನಿಗಳು :–** ನಮಸ್ಕಾರ, ನಿಮ್ಮನ್ನು ಭೇಟಿ ಆಗಿದಕ್ಕೆ ಬಹಳ ಸಂತೋಷವಾಗಿದೆ.

**ರಾಜು :–** ನಿಮ್ಮ ಹೆಸರುಗಳೇನು? ನೀವು ಏನು ಮಾಡುತ್ತೀರಾ?

**ಜ್ಞಾನಿಗಳು :–** ನನ್ನ ಹೆಸರು ನಾಯುಡು, ನಾನು ವ್ಯಾಪಾರ ಮಾಡುತ್ತೇನೆ. ನನ್ನ ಹೆಸರು ಚೌದರಿ ನಾನು ಆರ್ಮಿಯಿಂದ ರಿಟೈರ್ಡ್ ಆಗಿದ್ದೇನೆ. ನನ್ನ ಹೆಸರು ಶಶಿಕಾಂತ್ ನಾನೂ ಕೂಡ ವ್ಯಾಪಾರವೇ ಮಾಡುತ್ತೇನೆ.

**ರಾಜು :–** ನನ್ನ ಹೆಸರು ರಾಜು. ನಾನು ಪ್ರಸಂಗಗಳು ಮಾಡುತ್ತಿರುತ್ತೇನೆ. ನಮ್ಮ ಗುರುಗಳು ರಾವುಅವರು. ಆತನು ಪ್ರಕಟಿಸಿದ ವಾಕ್ಯವೇ ಸೃಷ್ಠಿಕರ್ತಕೋಡ್ 666. ಇಲ್ಲಿ ಹೈದರಾಬಾದ್ ಸಿಕಿಂದ್ರಾಬಾದ್ ಎಲ್ಲಾ ಕಡೆ ಆ ವಾಕ್ಯವನ್ನು ನಾನೇ ಬರೆಸಿದ್ದೇನೆ. ಸಭೆಗಳು ಸಹ ಏರ್ಪಾಟುಮಾಡಿ ಆ ವಾಕ್ಯವನ್ನು ಕುರಿತು ಪ್ರಸಂಗಗಳು ಸಹ ಮಾಡಿದ್ದೇವೆ. ನೀವು ಯಾವುದರ ವಿವರ ಬೇಕೆಂದು ಬಂದಿದ್ದೀರಾ?

**ಜ್ಞಾನಿಗಳು :–** ನಾವು ಇಂದೂಗಳೇ ಆದರೂ ನಮಗೆ ಪರಮತ ದ್ವೇಷವಿಲ್ಲ. ನಾವು ಆಧ್ಯಾತ್ಮಿಕ ಪ್ರಿಯರು. ಆದ್ದರಿಂದ ಭಗವದ್ಗೀತೆ ಓದಿದ್ದೇವೆ, ಬೈಬಲ್‌ನಲ್ಲಿ ನಾಲ್ಕು ಸುವಾರ್ತೆಗಳು ಓದಿದ್ದೇವೆ. ಎಲ್ಲರಿಗೂ ದೇವರೊಬ್ಬನೆ ಎಂದು ನಿರ್ಣಯದಿಂದ ಇದ್ದೇವೆ. ನೀವು ಸೃಷ್ಠಿಕರ್ತ ಸಂಖ್ಯೆಯನ್ನು ಬರೆಯುವುದರಿಂದ ನಮಗೆ ಸ್ವಲ್ಪ ಆಶ್ಚರ್ಯ, ಅದ್ಭುತ ಎನಿಸಿತು. ಅದು ಬೈಬಲ್‌ನಲ್ಲಿನ ವಾಕ್ಯವೆಂದು ತಿಳಿದುಕೊಂಡು ಅದನ್ನು ಹುಡುಕಿ ಓದಿದ್ದೇವೆ. ಅಲ್ಲಿ ನಮಗೆ ಅರ್ಥವಾಗದೆ ಹೋಗುವುದಲ್ಲದೆ ಅದು ಸೃಷ್ಠಿಕರ್ತಕೋಡ್ ಅಲ್ಲವೇನೋ ಎಂದೆನಿಸಿತು. ನಾವು

ಬೈಬಲ್‌ನಲ್ಲಿನ ಹತ್ತುಪೈಸಾ ಭಾಗವಾದ ಮತ್ತಾಯ, ಮಾರ್ಕ, ಲೂಕಾ, ಯೋಹಾನ್ ಎನ್ನುವ ನಾಲ್ಕು ಸುವಾರ್ತೆಗಳನ್ನು ಮಾತ್ರವೇ ಓದಿದ್ದೇವೆ ಆದರೆ ಬೈಬಲ್‌ಯೆಲ್ಲಾ ತಿಳಿದಿಲ್ಲ. ಆದ್ದರಿಂದ ನಮಗೆ ತಿಳಿಯದ ವಿಷಯ ತಮ್ಮಿಂದ ತಿಳಿದುಕೊಳ್ಳಬೇಕೆಂದುಕೊಂಡಿದ್ದೇವೆ.

**ರಾಜು :–** ನೀವು ಹಿಂದುಗಳೆನ್ನುತ್ತಿದ್ದೀರ ಆದ್ದರಿಂದ ನಾನು ಮೊದಲನೆಯದಾಗಿ ಕೇಳುವುದೇನೆಂದರೇ! ನೀವು ದೇವರೊಬ್ಬನೇ ಎಂದು ನಂಬುತ್ತೀರಾ? ಅಥವಾ ದೇವತೆಗಳೆಲ್ಲರನ್ನೂ ನಂಬುತ್ತೀರಾ?

**ಜ್ಞಾನಿಗಳು :–** ನಾವು ಮನುಷ್ಯರೆಲ್ಲರಿಗೂ ದೇವರೊಬ್ಬನೇ ಎಂದು ನಂಬುತ್ತೇವೆ. ದೇವರನ್ನು ಬಿಟ್ಟರೆ ಯಾವ ಇತರ ದೇವತೆಗಳನ್ನು ಪೂಜಿಸುವುದಿಲ್ಲ. ಹಿಂದೂಗಳಲ್ಲಿ ನಾವು ಸ್ವಲ್ಪ ಪ್ರತ್ಯೇಕವಾಗಿ ಕಾಣಿಸುತ್ತಿರುತ್ತೇವೆ.

**ರಾಜು :–** ಸೃಷ್ಟಿಕರ್ತಕೋಡ್ 666 ಎನ್ನುವ ವಿವರ ನಿಮಗೆ ಅರ್ಥವಾಗಬೇಕೆಂದರೆ ಅದನ್ನು ಕುರಿತು ಹೇಳುವುದಕ್ಕೆ ಬಹಳ ಸಮಯ ಬೇಕಾಗುತ್ತದೆ. ಅಷ್ಟುಹೊತ್ತು ನೀವು ತಾಳ್ಮೆಯಿಂದ ಕೇಳುತ್ತೀರಾ?

**ಜ್ಞಾನಿಗಳು :–** ಎಷ್ಟು ಸಮಯವಾದರೂ ಕೇಳುತ್ತೇವೆ. ನಾವು ಕೆಲಸಗಳೆಲ್ಲವೂ ಬಿಟ್ಟು ಮೂವತ್ತು ಕಿಲೋಮೀಟರುಗಳು ಅದಕ್ಕಾಗಿಯೇ ಬಂದಿದ್ದೇವೆ.

**ರಾಜು :–** ನಾವಿರುತ್ತಿರುವ ಭೂಗೋಳದಲ್ಲಿ ಒಂದು ಭಾಗ ಭೂಮಿ, ಮೂರು ಭಾಗಗಳು ಸಮುದ್ರವಿದೆ. ಒಂದು ಭಾಗ ಭೂಮಿ ಮೇಲೆಯೇ ಸಣ್ಣವು ದೊಡ್ಡವೂ ಸುಮಾರು 360 ದೇಶಗಳು ಇವೆ. ಅದರಲ್ಲಿ ಒಂದು ಭಾರತದೇಶದಲ್ಲಿ ಆಂಧ್ರಪ್ರದೇಶದಲ್ಲಿ ನಾವು ನಿವಾಸಿಸುತ್ತಿದ್ದೇವೆ. ಆಂಧ್ರಪ್ರದೇಶದಲ್ಲಿ 23 ಜಿಲ್ಲೆಗಳು ಇವೆ. ಒಂದು ಜಿಲ್ಲೆ ಎಷ್ಟೋ ವಿಸ್ತೀರ್ಣತೆಯನ್ನು ಹೊಂದಿದೆ. ಅದರಲ್ಲಿ ನಾವೂ ನಮ್ಮ ಪ್ರದೇಶ ಸೂಕ್ಷ್ಮಾತಿ ಸೂಕ್ಷ್ಮ. ಒಂದು ಜಿಲ್ಲೆಯೊಂದಿಗೆ ಹೋಲಿಸಿ ನೋಡಿದರೆ ಮನುಷ್ಯ ಎಷ್ಟೋ ಚಿಕ್ಕವನಲ್ಲವೆ! ಒಂದು ರಾಷ್ಟ್ರ ವಿಸ್ತೀರ್ಣದೊಂದಿಗೆ

ಹೋಲಿಸಿದರೆ ಅಂತ್ಯವಿಲ್ಲದಷ್ಟು ಚಿಕ್ಕವರಾಗಿ ಹೋಗುತ್ತೇವೆ. ದೇಶದೊಂದಿಗೆ ಹೋಲಿಸಿ ನೋಡಿದರೆ ಲೆಕ್ಕಕ್ಕೇ ಬರುವುದಿಲ್ಲ. ಇಂತಹ ಎಷ್ಟೋ ದೇಶಗಳಿರುವ ಭೂಮಿಗಿಂತಲೂ ಸಮುದ್ರ ಮೂರರಷ್ಟು ಹೆಚ್ಚಾಗಿ ಭೂಗೋಳದಲ್ಲಿ ಇದೆಯೆಂದುಕೊಂಡಿದ್ದೇವೆ. ಇಷ್ಟು ದೊಡ್ಡ ಭೂಗೋಳಕ್ಕಿಂತಲೂ ಎಷ್ಟೋ ಲಕ್ಷಪಟ್ಟು ದೊಡ್ಡದು ಸೂರ್ಯಗೋಳ. ಹೀಗೆ ನಾವು ಊಹಿಸಲಾರದಷ್ಟು ದೊಡ್ಡದಾದ ಸೂರ್ಯಗೋಳಕ್ಕಿಂತಲೂ ಎಷ್ಟೋ ಕೋಟಿಗಳಷ್ಟು ದೊಡ್ಡವು ನಕ್ಷತ್ರಗಳು. ಅಂತಹ ಎಷ್ಟೋ ನಕ್ಷತ್ರಗಳು ಸೇರಿದರೆ ಒಂದು ನಕ್ಷತ್ರಪುಂಜ. ಇಂತಹ ನಕ್ಷತ್ರಪುಂಜಗಳು ಎಷ್ಟೋ ಲಕ್ಷಗಳು ಕೂಡಿದರೆ ಒಂದು ಮಂಡಲ. ಅಂತಹ ಮಂಡಲಗಳು ಕೆಲವು ಸಾವಿರ ಕೂಡಿದರೆ ಒಂದು ಮಹಾಮಂಡಲ. ಅಂತಹ ಮಹಾಮಂಡಲಗಳು ಎಷ್ಟು ಇವೆಯೋ ಮಾನವನ ಬುದ್ಧಿಗೆ ಸಿಗಲಿಲ್ಲ. ಇದನ್ನನುಸರಿಸಿ ನೋಡಿದರೆ ಇಷ್ಟು ಸೃಷ್ಠಿಯನ್ನು ತಯಾರಿಸಿದವನು ಎಷ್ಟು ದೊಡ್ಡವನೊ ಹೇಳಲಾರೆವು. ಈ ಸೃಷ್ಠಿಯನ್ನು ತಯಾರು ಮಾಡಿದವನನ್ನು ಸೃಷ್ಠಿಕರ್ತ ಎನ್ನುತ್ತಿದ್ದೇವೆ. ಅಷ್ಟು ದೊಡ್ಡ ಸೃಷ್ಠಿಕರ್ತನನ್ನು ಕುರಿತು ಬೈಬಲ್‌ನಲ್ಲಿ ಬರೆಯಲಾಗಿದೆ. ಯಾವ ಇತರ ಗ್ರಂಥದಲ್ಲಿಲ್ಲದ ವಿಧವಾಗಿ ಎಷ್ಟೋ ದೊಡ್ಡದಾಗಿ ಬೈಬಲ್‌ನಲ್ಲಿ ದೇವರು ಭೂಮಿ ಆಕಾಶವನ್ನು ಸೃಷ್ಠಿಸಿದ್ದಾನೆಂದು ಇದೆ.

**ಜ್ಞಾನಿಗಳು :–** ಭೂಮಿಯನ್ನು, ಆಕಾಶವನ್ನು ದೇವರೇ ಸೃಷ್ಠಿಸಿದ್ದಾನೆಂದು ನಾವೂ ಸಹ ವಿಶ್ವಾಸಿಸುತ್ತಿದ್ದೇವೆ. ಅದರಲ್ಲಿ ಯಾವ ಸಂಶಯವಿಲ್ಲ. ನಮಗಿರುವ ಸಂಶಯ ಸೃಷ್ಠಿಕರ್ತನಾದ ದೇವರಿಗೆ ಕೋಡ್ ಇದೆಯಾ? ಇದ್ದರೆ ಅದು ಆರುನೂರಾ ಅರವತ್ತಾರಾಗಿಯೇ (666) ಏಕೆ ಇದೆ? ಈ ವಿಷಯವನ್ನು ಕುರಿತುಯಾರಾದರೂ ನಮ್ಮನ್ನು ಕೇಳಿದರೆ ನಾವು ಅವರಿಗೆ ಏನೆಂದು ಸಮಾಧಾನ ಹೇಳಬೇಕು?

**ರಾಜು :–** ಯಾರಾದರೂ ಕೇಳಿದಾಗ ಹೀಗೆ ಹೇಳಿ. ದೇವರು ಈ ಸೃಷ್ಠಿ ಯೆಲ್ಲವನ್ನೂ ತಯಾರು ಮಾಡುವುದಕ್ಕೆ ಆರುದಿನಗಳ ಕಾಲ ಬೇಕಾಗಿದೆ. ಆರು ದಿನಗಳಲ್ಲಿ ಮನುಷ್ಯನನ್ನು ಆರನೇ ದಿನ ಸೃಷ್ಠಿಸಿದ್ದಾನೆ. ನಂತರ ಆರು

ದಿನಗಳಿಗೆ ಸಾತಾನ್‌ನನ್ನು ತಯಾರು ಮಾಡಿದ್ದಾನೆ. ಆದ್ದರಿಂದ ದೇವರ ಗುರುತನ್ನು ಆರುನೂರಾ ಅರವತ್ತಾರಾಗಿ (666) ಇಟ್ಟುಕೊಂಡಿದ್ದೇವೆ. ಈ ಅರ್ಥದಿಂದಲೇ ನಾವು ಗೋಡೆಗಳ ಮೇಲೆ ಸೃಷ್ಠಿಕರ್ತ ಕೋಡ್ 666 ಎಂದು ಬರೆದಿದ್ದೇವೆ. ಯಾರಾದರೂ ಕೇಳಿದರೆ ಇದೇ ವಿವರವನ್ನು ಹೇಳಿರಿ.

**ಜ್ಞಾನಿಗಳು :–** ಸೃಷ್ಠಿಯನ್ನು ತಯಾರು ಮಾಡುವುದಕ್ಕೆ ಆರುದಿನಗಳು ಬೇಕಾಗಿದೆ ಎಂದಿದ್ದೀರಲ್ಲ! ಈ ವಿಷಯ ಬೈಬಲ್‌ನಲ್ಲಿ ಇದೆಯಾ?

**ರಾಜು :–** ಬೈಬಲ್ ಆದಿಕಾಂಡದಲ್ಲಿ ಮೊದಲನೇ ಅಧ್ಯಾಯದಲ್ಲೇ ಇದೆ. ಮನೆಗೆ ಹೋದ ನಂತರ ಬೈಬಲ್‌ನಲ್ಲಿ ಹಳೇ ಒಡಂಬಡಿಕೆಯಲ್ಲಿ ಮೊಟ್ಟಮೊದಲೇ ಇರುವ ವಿಷಯವನ್ನು ನೋಡಿಕೊಳ್ಳಿ.

**ಜ್ಞಾನಿಗಳು :–** ನೀವು ಗೋಡೆಗೆ ಹಾಕಿದ ಪೋಸ್ಟರ್ಸ್ ಮೇಲೆ ಸೃಷ್ಠಿಕರ್ತ ಕೋಡ್ 666 ಎಂದು ಬರೆದು, ಕೆಳಗೆ ಯೋಹಾನು ಪ್ರಕಟಣೆಗಳ ಗ್ರಂಥ 13ನೇ ಅಧ್ಯಾಯ 18ನೇ ವಾಕ್ಯ ಎಂದು ಬರೆದಿದ್ದೀರಲ್ಲ! ಆ ವಾಕ್ಯವನ್ನು ನೋಡಿದರೆ ಬುದ್ಧಿ ಇರುವವನು ಮೃಗದ ಸಂಖ್ಯೆಯನ್ನು ಲೆಕ್ಕಿಸಲಿ, ಇದು ಒಂದು ಮನುಷ್ಯನ ಸಂಖ್ಯೆ ಎಂದು ಇದೆ. ಇದರಲ್ಲಿ ಜ್ಞಾನವಿದೆ ಎಂದು ಸಹ ಇದೆ. 13ನೇ ಅಧ್ಯಾಯದಲ್ಲಿ ಕೊನೆಯ ವಾಕ್ಯವಾದ 18ನೇ ವಾಕ್ಯವೆಲ್ಲವನ್ನೂ ನೋಡಿದ ನಂತರ, ಅದಕ್ಕು ಮೊದಲ ಅಧ್ಯಾಯದಲ್ಲಿ ಮೊದಲಿರುವ 17 ವಾಕ್ಯಗಳನ್ನೂ ನೆನಪುಮಾಡಿಕೊಂಡರೆ ಸಾತಾನನ್ನು ಮೃಗವೆಂದು ಹೇಳಿದಹಾಗಿದೆ. ಸಾತಾನಾದ ಮೃಗದ ಸಂಖ್ಯೆ ಎಂದು ಇರುವುದರಿಂದ ಇದು ಸಾತಾನು ಸಂಖ್ಯೆಯೇ ಇರಬಹುದೆಂದು ಅನುಮಾನ ಬರುತ್ತದಲ್ಲ!

**ರಾಜು :–** ವಾಕ್ಯದ ಕೊನೆಯಲ್ಲಿ ಇದರಲ್ಲಿ ಜ್ಞಾನವಿದೆ ಎಂದು ಇದೆಯಲ್ಲ! ಆದ್ದರಿಂದ ಅದು ದೇವರ ಸಂಖ್ಯೆಯೇ ಎಂದು ಹೇಳಬೇಕು.

**ಜ್ಞಾನಿಗಳು :–** ಇಲ್ಲಿ ನಮಗೆ ಸ್ವಲ್ಪ ಅರ್ಥವಾಗಲಿಲ್ಲ. ಸ್ವಲ್ಪ ಅರ್ಥವಾಗುವಹಾಗೆ ವಿವರವಾಗಿ ಹೇಳಿ.

**ರಾಜು :–** ನಿಮಗೆ ಅರ್ಥವಾಗುವಹಾಗೆ ಒಂದು ಉದಾಹರಣೆ ಹೇಳುತ್ತೇನೆ. ಕೋರ್ಟ್‌ನಲ್ಲಿ ಜಡ್ಜಿ ಇದ್ದಾನೆಂದುಕೊ, ಆ ಜಡ್ಜಿ ಒಬ್ಬ ಅಪರಾದಿಗೆ ಶಿಕ್ಷೆ ವಿಧಿಸಿದ್ದಾನೆ. ಶಿಕ್ಷೆ ಬಿದ್ದವನಿಗೆ ಜಡ್ಜಿಯೇ ಒಂದು ನಂಬರ್ ಕೊಡುತ್ತಾನೆ. ಶಿಕ್ಷೆ ಬಿದ್ದವನನ್ನು ಖೈದಿ ಎನ್ನುತ್ತೇವೆ. ಅವನಿಗೆ ಕೊಟ್ಟ ನಂಬರನ್ನು ಖೈದೀನಂಬರ್ ಎನ್ನುತ್ತೇವೆ. ಖೈದಿಗೆ 112 ನಂಬರ್ ಜಡ್ಜಿಯೇ ಕೊಟ್ಟಿದ್ದಾನಲ್ಲ! ಖೈದೀ ಹತ್ತಿರ ಮೊದಲು ನಂಬರ್ ಇಲ್ಲವಲ್ಲ! ನಂಬರನ್ನು ಜಡ್ಜಿಯೇ ಕೊಟ್ಟಿದ್ದಾನೆ ಆದ್ದರಿಂದ ಅದು ಜಡ್ಜಿನಂಬರೇ ಅಲ್ಲವೆ! ಹಾಗೇ ಅಪರಾದಿಯಾದ ಸಾತಾನ್‌ಗೆ ದೇವರೇ ಶಿಕ್ಷೆಹಾಕಿ ನಂಬರು ಕೊಟ್ಟಿದ್ದಾನೆ. ಆದ್ದರಿಂದ ಅದು ದೇವರ ನಂಬರೇ ಆಗುತ್ತದೆ. ಅರ್ಥವಾಗಿದೆಯಾ?

**ಜ್ಞಾನಿಗಳು :–** ಇಲ್ಲೊಂದು ಚಿಕ್ಕ ಸಂಶಯ, 112 ನಂಬರನ್ನು ಜಡ್ಜಿ ಕೊಟ್ಟಿದ್ದರೂ 112 ಎಂದು ಕರೆದರೆ ಖೈದೀಯೇ ಮಾತನಾಡುತ್ತಾನೆ. ಆದರೆ ಜಡ್ಜಿ ಮಾತನಾಡುವುದಿಲ್ಲವಲ್ಲ! ಆಗ ಅದು ಖೈದೀ ನಂಬರಾ? ಜಡ್ಜೀ ನಂಬರಾ?

**ರಾಜು :–** ಅದು ಖೈದೀ ನಂಬರೇ ಆದರೇ ಖೈದೀನಂಬರೆಂದು ಹೇಳಬಾರದು. ಕೊಟ್ಟವನು ಜಡ್ಜಿ ಆಗಿರುವುದರಿಂದ ಜಡ್ಜಿನಂಬರೇ ಎಂದು ಹೇಳಬೇಕು. ಹಾಗೇ 666 ನಂಬರು ಸಾತಾನದ್ದೆ, ಆದರೂ ಕೊಟ್ಟವನು ದೇವರು ಆದ್ದರಿಂದ ಅದು ದೇವರ ನಂಬರೇ ಎಂದು ಹೇಳಬೇಕು. ಒಂದು ಸಮಯದಲ್ಲಿ ಸಾತಾನಿಗೆ ನಂಬರು ಇಲ್ಲ, ಸಾತಾನಿಗೆ ದೇವರು ಶಿಕ್ಷೆ ಹಾಕಿದ್ದಾನೆ, ನಂಬರೂ ಕೊಟ್ಟಿದ್ದಾನೆ.

**ಜ್ಞಾನಿಗಳು :–** ಈ ಸಾತಾನು ಯಾರು? ಸಾತಾನು ದೇವರಿಗೆ ವಿರುದ್ಧವಾಗಿ ಏಕೆ ಕೆಲಸ ಮಾಡುತ್ತಿದೆ? ಅಪರಾದಿ ಆದ ಸಾತಾನಿಗೆ ದೇವರು ಶಿಕ್ಷೆ ಏಕೆ ಹಾಕಿದ್ದಾನೆ?

**ರಾಜು :–** ಸಾತಾನು ಒಂದು ಸಮಯದಲ್ಲಿ ದೇವರಿಗೆ ಮುಖ್ಯವಾದ ಮನೆಯ ಮನುಷ್ಯನಂತೆ ಇರುತ್ತಿದ್ದನು. ದೇವರ ಮನೆ ವಿಶಾಲವಾದದ್ದು. ದೇವರ ಮನೆಯಲ್ಲಿ ಎಷ್ಟೋ ಜನ ಕೆಲಸ ಮಾಡುವ ಮನುಷ್ಯರು ಇರುತ್ತಿದ್ದರು. ಅದರಲ್ಲಿ ಸಾತಾನು

ಮುಖ್ಯವಾದ ಕೆಲಸದ ಮನುಷ್ಯ. ಹಾಗೆ ಇರುವ ಸಾತಾನು ದೇವರನ್ನು ಮೋಸ ಮಾಡಿದ್ದಾನೆ. ಅದನ್ನು ದೇವರು ಕಂಡುಕೊಂಡು ನೀನು ನನ್ನನ್ನು ಮೋಸ ಮಾಡಿದ್ದೀಯ ಆದ್ದರಿಂದ ನಿನ್ನನ್ನು ಭೂಲೋಕಕ್ಕೆ ಕಳುಹಿಸುತ್ತಿದ್ದೇನೆಂದು ಭೂಲೋಕಕ್ಕೆ ತಳ್ಳಿದ್ದಾನೆ. ಆ ವಿಧವಾಗಿ ದೇವರು ಸಾತಾನಿಗೆ ಶಿಕ್ಷೆ ಹಾಕಿದ್ದಾನೆ. ದೇವರ ಹತ್ತಿರ ಶಿಕ್ಷೆ ಹಾಕಲ್ಪಟ್ಟು ಭೂಲೋಕಕ್ಕೆ ಬಂದಿರುವ ಸಾತಾನು ತನಗೆ ಶಿಕ್ಷೆ ಹಾಕಿದ ದೇವರ ಮೇಲೆ ಕೋಪದಿಂದಿದ್ದು ದೇವರಿಗೆ ವಿರುದ್ಧವಾಗಿ ಮನುಷ್ಯರನ್ನು ಬದಲಾಯಿಸಲು ಪ್ರಾರಂಭಮಾಡಿದ್ದಾನೆ. ಆ ವಿಧವಾಗಿ ಭೂಲೋಕದಲ್ಲಿ ಸಾತಾನು ದೇವರ ರಾಜ್ಯವಿಲ್ಲದಂತೆ ಮಾಡಿ, ತನ್ನ ರಾಜ್ಯವನ್ನು ತಯಾರು ಮಾಡಿಕೊಳ್ಳಬೇಕೆಂದುಕೊಂಡಿದ್ದಾನೆ. ಆದ್ದರಿಂದ ಪ್ರತಿ ಮನುಷ್ಯನನ್ನು ದೇವರ ಕಡೆ ಹೋಗದಂತೆ, ದೇವರ ಜ್ಞಾನ ತಿಳಿಯದಂತೆ ಸಾತಾನು ಮಾಡುತ್ತಿದ್ದಾನೆ.

**ಜ್ಞಾನಿಗಳು :–** ದೇವರ ವಿಶಾಲವಾದ ಮನೆಯಲ್ಲಿ ಎಷ್ಟೋ ಜನ ಕೆಲಸಮಾಡುವವರಿರುವಾಗ, ಅವರು ತನ್ನನ್ನು ಮೋಸ ಮಾಡದಂತೆ ದೇವರು ಮೊದಲೇ ಜಾಗ್ರತೆಪಡಲಿಲ್ಲವೇ?

**ರಾಜು :–** ಮನೆಯಲ್ಲಿ ಕೆಲಸದವರಂದಮೇಲೆ ಯಾವುದೋ ಒಂದು ಮೋಸ ಮಾಡುತ್ತಾರೆಂದು ಜಾಗ್ರತೆಯಿಂದ ಇದ್ದ ದೇವರು, ಕೆಲಸದ ಮನುಷ್ಯರ ಮೇಲೆ ಆಧಾರಪಡದೆ ಇರುವುದಕ್ಕೆ ತನಗೆ ಸ್ವಂತ ಗಂಡು ಮಕ್ಕಳಿದ್ದಿದ್ದರೆ ಚೆನ್ನಾಗಿರುತ್ತದೆಂದುಕೊಂಡಿದ್ದಾನೆ. ಆ ವಿಧವಾಗಿ ಅಂದುಕೊಂಡ ನಂತರ ಮೊದಲು ಕ್ರಿಸ್ತನನ್ನು ಹುಟ್ಟಿಸಿಕೊಂಡಿದ್ದಾನೆ, ನಂತರ ಯೇಸನ್ನು ಹುಟ್ಟಿಸಿಕೊಂಡಿದ್ದಾನೆ. ಆತನ ಕುಮಾರರಲ್ಲಿ ಕ್ರಿಸ್ತ, ಯೇಸು ಇಬ್ಬರೂ ಮುಖ್ಯವಾದವರು. ಉಳಿದ ಕುಮಾರರನ್ನು ದೇವರಿಗಿರುವ ಎಷ್ಟೋ ನಿವಾಸಗಳಲ್ಲಿ ಕೆಲವುಗಳಲ್ಲಿ ಅವರನ್ನಿಟ್ಟಿದ್ದಾನೆ.

**ಜ್ಞಾನಿಗಳು :–** ಕ್ರಿಸ್ತ ಯಾರು? ಕ್ರಿಸ್ತ ಬೇರೆ ಯೇಸು ಬೇರೇನಾ?

**ರಾಜು :–** ಪರಿಶುದ್ಧ ಗ್ರಂಥ ಬೈಬಲ್‌ನಲ್ಲಿ ಮತ್ತಾಯ ಸುವಾರ್ತೆಯಲ್ಲಿ 1ನೇ ಅಧ್ಯಾಯದಲ್ಲಿ 16ನೇ ವಾಕ್ಯದಲ್ಲಿ "ಆಕೆಯಲ್ಲಿ ಕ್ರಿಸ್ತ ಎನ್ನುವ ಯೇಸು ಹುಟ್ಟಿದನು" ಎಂದು ಇದೆ. ಈ ವಾಕ್ಯವನ್ನು ಚೆನ್ನಾಗಿ ಅರ್ಥ ಮಾಡಿಕೊಂಡರೆ ಕ್ರಿಸ್ತ ಎನ್ನುವ ಯೇಸು ಹುಟ್ಟಿದನು ಎಂದಾಗ ಇದಕ್ಕೂ ಮೊದಲೇ ಕ್ರಿಸ್ತ ಎನ್ನುವಾತನು ಇರುವಹಾಗೆ ಆತನೇ ಈಗ ಯೇಸಾಗಿ ಹುಟ್ಟಿದ್ದಾನೆಂದು ಅರ್ಥವಾಗುತ್ತದೆ. ಕ್ರಿಸ್ತ ಯೇಸು ಹುಟ್ಟದ ಮೊದಲೆ ದೇವರಾದ ಎಹೋವಾ ಕುಮಾರನು. ಆದ್ದರಿಂದ ಕ್ರಿಸ್ತ ಎನ್ನುವ ಎಂದು ಅಲ್ಲಿ ಹೇಳಿದ್ದಾರೆ, ಕ್ರಿಸ್ತನೇ ಯೇಸಾಗಿ ಹುಟ್ಟಿದ್ದಾನೆಂದು, ಕ್ರಿಸ್ತ, ಯೇಸು ಇಬ್ಬರೂ ದೇವರ ಕುಮಾರರೇ ಎಂದು ಹೇಳಬಹುದು. ಇದರ ಪ್ರಕಾರ ಯೇಸನ್ನು ದೇವರ ಕುಮಾರನೆಂದು ಬಹಳ ಸಲ ಬೈಬಲ್‌ನಲ್ಲಿ ಹೇಳಿದ್ದಾರೆ.

**ಜ್ಞಾನಿಗಳು :–** ದೇವರ ಕುಮಾರನು ಯೇಸು ಎಂದು ಒಪ್ಪಿಕೊಳ್ಳುತ್ತೇವೆ. ಆದರೆ ನಾವೆಲ್ಲಾ ದೇವರ ಕುಮಾರರಲ್ಲವೇ! ದೇವರು ನಮ್ಮನ್ನು ಹುಟ್ಟಿಸಲಿಲ್ಲವೆ?

**ರಾಜು :–** ಯೇಸು ಪ್ರಭು ಒಬ್ಬನೇ ದೇವರ ಕುಮಾರನು. ನಾವೆಲ್ಲಾ ಸರ್ಪಸಂತಾನವೆ. ಆದ್ದರಿಂದ ದೇವರ ಕುಮಾರರಲ್ಲ.

**ಜ್ಞಾನಿಗಳು :–** ನೀವು ಹೇಳಿದ ಮತ್ತಾಯ ಸುವಾರ್ತೆ, 23 ಅಧ್ಯಾಯ, 9ನೇ ವಚನದಲ್ಲಿ "ಭೂಮಿ ಮೇಲೆ ಯಾವನಿಗಾದರೂ ತಂದೆ ಎಂದು ಹೆಸರು ಇಡಬೇಡ, ಒಬ್ಬನೇ ನಿಮ್ಮ ತಂದೆ. ಆತನು ಪರಲೋಕದಲ್ಲಿದ್ದಾನೆ." ಎಂದು ಬರೆಯಲಾಗಿದೆಯಲ್ಲ! ಇದರ ಪ್ರಕಾರ ನಾವೆಲ್ಲಾ ದೇವರ ಕುಮಾರರಲ್ಲವೆ?

**ರಾಜು :–** ಪ್ರಭುವು ಒಬ್ಬನೇ ದೇವರ ಕುಮಾರನು, ನಾವೆಲ್ಲಾ ದೇವರ ಕುಮಾರರಲ್ಲ. ಇದರ ವಿಷಯಕ್ಕೋಸ್ಕರ ಲೂಕಾ ಸುವಾರ್ತೆ, ಮೂರನೇ (3) ಅಧ್ಯಾಯ, ಏಳನೇ (7) ವಚನದಲ್ಲಿ ನೋಡಿದರೆ "ಆತನು ತನ್ನಿಂದ ಬಾಪ್ತಿಸ್ಮ ಹೊಂದುವುದಕ್ಕೆ ಬಂದ ಜನ ಸಮೂಹಗಳನ್ನು ನೋಡಿ ಸರ್ಪಸಂತಾನವೇ! ಮುಂಬರುವ ಉಗ್ರತೆಯನ್ನು ತಪ್ಪಿಸಿಕೊಳ್ಳುವುದಕ್ಕೆ ನಿಮಗೆ ಬುದ್ಧಿ ಹೇಳಿದವನ್ಯಾರು"

ಎಂದು ಇದೆ. ಬಾಪ್ತಿಸ್ಮ ಕೊಡುವ ಯೋಹಾನನ ಹತ್ತಿರಕ್ಕೆ ಬಂದಿರುವ ಜನರನ್ನು ನೋಡಿ ಯೋಹಾನನು ಜನರನ್ನು ಸರ್ಪಸಂತಾನವೇ ಎಂದಿದ್ದಾನಲ್ಲ! ಅದನ್ನನುಸರಿಸಿ ನಾವೆಲ್ಲಾ ಸರ್ಪಸಂತಾನವೆಂದು ತಿಳಿಯುತ್ತಿದೆಯಲ್ಲ!

**ಜ್ಞಾನಿಗಳು :–** ನಾವೇನಾದರೂ ಸಾತಾನು ಪ್ರಭಾವದಿಂದ ಬೈಬಲ್‌ನಲ್ಲಿನ ವಿಷಯಗಳನ್ನು ತಪ್ಪಾಗಿ ಅರ್ಥ ಮಾಡಿಕೊಳ್ಳುತ್ತಿದ್ದೇವೇನೋ! ಹಾಗೆ ತಪ್ಪಾಗಿ ಅರ್ಥ ಮಾಡಿಕೊಂಡವರಿಗೆ ತಾನು ಹೇಳಿದ ವಿಷಯಗಳನ್ನು ಪುನಃ ಜ್ಞಾಪಕ ಮಾಡುವುದಕ್ಕೆ ಪರಿಶುದ್ಧಾತ್ಮನೇ ಪುನಃ ಆದರಣಕರ್ತ ರೂಪದಲ್ಲಿ ಬರುತ್ತೇನೆಂದಿದೆಯೇನೋ! ಯೋಹಾನು ಸುವಾರ್ತೆ 14ನೇ ಅಧ್ಯಾಯ, 26ನೇ ವಾಕ್ಯದಲ್ಲಿ "ಆದರಣಕರ್ತ ಎಂದರೆ ತಂದೆ ನನ್ನ ನಾಮದಲ್ಲಿ ಕಳುಹಿಸುತ್ತಿರುವ ಪರಿಶುದ್ಧಾತ್ಮ. ಸಮಸ್ತವನ್ನು ನಿಮಗೆ ಬೋಧಿಸಿ, ನಾನು ನಿಮ್ಮೊಂದಿಗೆ ಹೇಳಿದ ಸಂಗತಿಗಳೆಲ್ಲವನ್ನೂ ನಿಮಗೆ ಜ್ಞಾಪಕ ಮಾಡುವನು." ಎಂದು ಇದೆ. ಆತನು ಹೇಳಿರುವ ವಿಷಯಗಳೆಲ್ಲವನ್ನೂ ಸರಿಯಾದ ಅರ್ಥದೊಂದಿಗೆ ಅಲ್ಲದೇ ಬೇರೆ ವಿಧವಾಗಿ ಅರ್ಥಮಾಡಿಕೊಂಡಾಗ, ಪುನಃ ಆತನು ಹೇಳಿದ ಸಂಗತಿಗಳನ್ನು ಜ್ಞಾಪಕ ಮಾಡಬೇಕಾಗಿ ಬಂದಿದೆಯೇನೋ ಎಂದುಕೊಳ್ಳುತ್ತಿದ್ದೇವೆ. ಅಸಲು ಆದರಣ ಕರ್ತ ಯಾರು?

**ರಾಜು :–** ನಿಮಗೆ ಅರ್ಥವಾಗುವುದಕ್ಕೆ ನಾನೊಂದು ಪ್ರಶ್ನೆ ಕೇಳುತ್ತಿದ್ದೇನೆ. ನಿನ್ನ ಹೆಸರೇನು?

**ಜ್ಞಾನಿ :–** ನನ್ನ ಹೆಸರು ಶಶಿ ಎನ್ನುತ್ತಾರೆ.

**ರಾಜು :–** ಶಶಿ ಎಂಬ ಹೆಸರನ್ನು ಯಾರಿಗೆ ಇಟ್ಟಿದ್ದಾರೆ?

**ಶಶಿ :–** ನನ್ನ ಶರೀರಕ್ಕೆ.

**ರಾಜು :–** ಹಾಗಾದರೆ ನೀನು ಸತ್ತುಹೋದನಂತರ ನಿನ್ನ ಶರೀರ ಇದ್ದರೂ ಶಶಿಕಾಂತ್ ಸತ್ತುಹೋಗಿದ್ದಾನೆ ಎನ್ನುತ್ತಾರಲ್ಲ! ಆದ್ದರಿಂದ ಶರೀರಕ್ಕೆ ಹೆಸರು

ಇಡಲಿಲ್ಲ. ಶರೀರದೊಳಗಿರುವ ಆತ್ಮಕ್ಕೆ ಇಟ್ಟಿರುವ ಹೆಸರು ಶಶಿಕಾಂತ್. ಆತ್ಮ ಪರಿಶುದ್ಧವಾದದ್ದು. ನನ್ನ ಹೆಸರು ರಾಜು. ರಾಜು ಎಂಬ ಹೆಸರು ನನ್ನ ಶರೀರದಲ್ಲಿನ ಪರಿಶುದ್ಧಾತ್ಮಕ್ಕೆ ಇಟ್ಟಿರುವುದೇ ಆಗಲೀ ನನ್ನ ಶರೀರದ್ದಲ್ಲ. ಈಗ ರಾಜು ಎನ್ನುವ ನಾನು ನಿಮ್ಮೊಂದಿಗೆ ಮಾತನಾಡುತ್ತಿದ್ದೇನೆ. ಅಂದರೆ ನನ್ನ ಶರೀರದಲ್ಲಿನ ಪರಿಶುದ್ಧಾತ್ಮ ಮಾತನಾಡುತ್ತಿದೆಯೆಂದು ಅರ್ಥಮಾಡಿಕೊಳ್ಳಬೇಕು. ನನ್ನ ಪರಿಶುದ್ಧಾತ್ಮನೇ ತಾನೇ ನಿಮಗೆ ತಿಳಿಯದ ವಿಷಯಗಳನ್ನು ಹೇಳುತ್ತಿರುವುದು. ಆದರಣಕರ್ತನನ್ನೇ ಪರಿಶುದ್ಧಾತ್ಮ ಎನ್ನುತ್ತಿದ್ದೇವೆ. ಆದರಣಕರ್ತ ಬರುತ್ತಾನೆಂದರೆ ಎಲ್ಲಿಂದಲೋ ಬರುತ್ತಾನೆಂದಲ್ಲ. ನಮ್ಮೊಳಗಿಂದಲೇ ಮಾತನಾಡುತ್ತಾನೆಂದು ಅರ್ಥ ಮಾಡಿಕೊಳ್ಳಬೇಕು.

**ಜ್ಞಾನಿಗಳು :–** ಪರಿಶುದ್ಧಾತ್ಮವನ್ನು ಆದರಣಕರ್ತ ಎಂದು ಏಕೆ ಹೇಳಿದ್ದಾರೆ?

**ರಾಜು :–** ನಮ್ಮ ಪ್ರಸಂಗಗಳು ಕೇಳಿರಿ ಚೆನ್ನಾಗಿ ಅರ್ಥವಾಗುತ್ತದೆ. ನಾವು 2007 ಸೆಪ್ಟೆಂಬರ್ ತಿಂಗಳಿಂದ ಡಿಸೆಂಬರ್‌ವರೆಗು "ಮಾ" ಟೀವಿಯಲ್ಲಿ ಪ್ರಸಂಗಗಳನ್ನು ಬೆಳಿಗ್ಗೆ ಹೊತ್ತು ಹೇಳಿದ್ದೇವೆ. ಅವು ನಮ್ಮ ಹತ್ತಿರ ಸಿ.ಡಿಗಳ ರೂಪಗಳಲ್ಲಿ ಸಿಗುತ್ತವೆ. ನಿಮಗೆ ಕೆಲಸ ಏನಾದರೂ ಇದೆಯೇನೋ ನಂತರ ಯಾವಾಗಾದರೂ ಭೇಟಿಮಾಡುತ್ತೇವೆ.

**ನಾಯುಡು :–** ನಾವು ಎಲ್ಲಾ ಕೆಲಸಗಳನ್ನು ಬಿಟ್ಟು ನಿಮಗೋಸ್ಕರ 30 ಕಿಲೋಮೀಟರುಗಳ ದೂರದಿಂದ ಬಂದಿದ್ದೇವೆ. ನೀವು ಬಹಳ ಹೊತ್ತು ಆಗುತ್ತದೆ ಕೇಳುತ್ತೀರಾ ಎಂದು ಕೇಳಿದ್ದೀರ. ನಾವು ಎಷ್ಟು ಸಮಯವಾದರೂ ಕೇಳುತ್ತೇವೆಂದಿದ್ದೇವಲ್ಲ! ಇನ್ನೂ ಒಂದು ಗಂಟೆಯಾದರೂ ಇರುತ್ತೇವೆ.

**ರಾಜು :–** ಇಲ್ಲ ನನಗೂ ಸಹ ಸ್ವಲ್ಪ ಬೇರೆ ಕೆಲಸ ಇದೆ. ನಂತರ ಯಾವಾಗಾದರೂ ಬನ್ನಿ, ಆವಾಗಾದರೇ ಸಿಡೀಗಳು ಸಹ ಸಿಗುತ್ತವೆ.

**ಮೂವರೂ :–** ಸರಿ ಹಾಗೇ ಆಗಲೀ, ನಂತರ ಭೇಟಿಯಾಗುತ್ತೇವೆ ಕೊನೆಯದಾಗಿ

ಒಂದು ಸಣ್ಣ ಪ್ರಶ್ನೆ ಕೇಳುತ್ತಿದ್ದೇವೆ. ಯೇಸುಪ್ರಭು ಸತ್ತುಹೋದನಂತರ ಎಲ್ಲಿಗೆ ಹೋಗಿದ್ದಾನೆ?

**ರಾಜು :-** ದೇವರಿಗೆ ಆ ಲೋಕದಲ್ಲಿ ಅನೇಕ ನಿವಾಸಗಳು ಇವೆ ಎಂದು ಬೈಬಲ್‌ನಲ್ಲೇ ಇದೆ. ಅಂತಹ ಅನೇಕ ನಿವಾಸಗಳಲ್ಲಿ ದೇವರಹತ್ತಿರಕ್ಕೆ ಹೋದವರೆಲ್ಲರಿಗೂ ಒಬ್ಬೊಬ್ಬರನ್ನು ಒಂದೊಂದು ನಿವಾಸದಲ್ಲಿ ದೇವರು ಇರಿಸುತ್ತಾನೆ. ದೇವರ ಮಾರ್ಗವನ್ನು ಅನುಸರಿಸಿದವರೆಲ್ಲರೂ ದೇವರ ಹತ್ತಿರಕ್ಕೆ ಸೇರುವರು. ಅಂದವಾದ ದೇವರ ರಾಜ್ಯದಲ್ಲಿ ಎಷ್ಟೋ ಆಹ್ಲಾದಕರವಾದ ನಿವಾಸಗಳು ಇವೆ. ಆ ನಿವಾಸಗಳಲ್ಲಿ ಒಬ್ಬೊಬ್ಬರಿಗೆ ಒಂದೊಂದು ನಿವಾಸವನ್ನು ಕೊಟ್ಟು, ಅದರಲ್ಲಿ ಸ್ವತಂತ್ರವಾಗಿ ಎಲ್ಲಾ ಸೌಖ್ಯಗಳನ್ನು ಅನುಭವಿಸುತ್ತಾ ಇರುವಹಾಗೆ ದೇವರು ಮಾಡುವನು. ಯೇಸುಪ್ರಭು ಸಹ ದೇವರ ಹತ್ತಿರಕ್ಕೆ ಸೇರಿ ಅಲ್ಲಿ ದೇವರ ನಿವಾಸದಲ್ಲಿ ಇದ್ದಾನೆ. ಬೈಬಲ್‌ನಲ್ಲಿ ಹೇಳಿದ ಜ್ಞಾನವನ್ನು ಅನುಸರಿಸಿದರೆ ಯಾರಾದರೂ ದೇವರ ಹತ್ತಿರಕ್ಕೆ ಹೋಗಬಹುದು. ದೇವರ ರಾಜ್ಯದಲ್ಲಿ ನಿವಾಸವಿರಬಹುದು. ಯೇಸುಪ್ರಭುವು ಸಹ ಭೂಮಿ ಮೇಲೆ ಬರುವುದಕ್ಕಿಂತ ಮೊದಲು ದೇವರ ಹತ್ತಿರ ಇರುತ್ತಿದ್ದನು. ಆತನು ದೇವರ ರಾಜ್ಯದಿಂದ ಬಂದಿದ್ದಾನೆ, ಆದ್ದರಿಂದ ಪ್ರಜೆಗಳೊಂದಿಗೆ ನನ್ನ ರಾಜ್ಯ ಬೇರೆ ಇದೆಯೆಂದಿದ್ದಾನೆ.

ಈ ವಿಧವಾಗಿ ಅವರ ಸಂಭಾಷಣೆ ಮುಂದುವರೆಯಿತು. ಆ ವಿಷಯಗಳೆಲ್ಲವನ್ನೂ ಆ ಮೂವರಿಂದ ನಾವು ತಿಳಿದುಕೊಳ್ಳುವುದು ನಡೆದಿದೆ. ಇದೆಲ್ಲವೂ ದೇವರಿಗೆ ಸಂಬಂಧಿಸಿದ ವಿಷಯವಾದ್ದರಿಂದ ಪ್ರತಿಒಬ್ಬರಿಗೂ ಅದನ್ನು ತಿಳಿದುಕೊಳ್ಳುವುದಕ್ಕಾಗಲಿ, ಹೇಳುವುದಕ್ಕಾಗಲಿ ಹಕ್ಕು ಇದೆ. ತಿಳಿಯದಿರುವಾಗ ಯಾರಾದರೂ ತಿಳಿದುಕೊಳ್ಳುತ್ತಾನೆ. ಆದರೆ ತಿಳಿಸುವವನು ತನಗೆ ತಿಳಿದರೇನೆ ಹೇಳಬೇಕು. ಇಲ್ಲದೆ ಹೋದರೆ ಕುರುಡನು ಮತ್ತೊಬ್ಬ ಕುರುಡನಿಗೆ ದಾರಿ ತೋರಿಸಿದಹಾಗಿರುತ್ತದೆ. ನಾವು ಈ ಸಂಭಾಷಣೆ ಎಲ್ಲಾ ಕೇಳಿದ ನಂತರ

ನಮ್ಮಲ್ಲಿ ಎಷ್ಟೋ ಸಂಶಯಗಳು ಹೊರಟಿದವು. ಅವುಗಳ ಕ್ರಮವನ್ನು ಕೆಳಗೆ ಹೊಂದಿಸುತ್ತಿದ್ದೇವೆ.

ದೇವರು ಸಮಸ್ತವನ್ನೂ ಆರು ದಿನಗಳಲ್ಲಿ ಸೃಷ್ಟಿಸಿದ್ದಾನೆಂದು ಹೇಳಿದಾಗ, ಅದರಲ್ಲೇ ಆರನೇದಿನ ಮನುಷ್ಯನನ್ನು ಸೃಷ್ಟಿಸಿದ್ದಾನೆಂದು ಹೇಳಿದಾಗ, ನಂತರ ಆರು ದಿನಗಳಿಗೆ ಸಾತಾನ್‌ನ್ನು ತಯಾರು ಮಾಡಿದ್ದಾನೆಂದು ಹೇಳಿದಾಗ ಕೇಳುವುದಕ್ಕೆ ಚೆನ್ನಾಗೇ ಇದೆ. ಅದನ್ನು ಮೂರು ಆರುಗಳಾಗಿ ಹೇಳುವುದು ದಾರಿ ತಪ್ಪಿದ ಕೆಲಸವಾಗಿದೆ. ದೇವರು ಭೂಮಿ ಆಕಾಶಗಳೊಂದಿಗೆ ಸಹ ಸಮಸ್ತವನ್ನು ಮತ್ತು ಮನುಷ್ಯನನ್ನು ಸೃಷ್ಟಿಸುವುದಕ್ಕೆ ಆರುದಿನಗಳು ಬೇಕಾಗಿದೆ, ನಂತರ ಆರುದಿನಗಳಿಗೆ ಸಾತಾನ್‌ನನ್ನು ತಯಾರು ಮಾಡಿದ್ದಾನೆ. ಇಲ್ಲಿ ಹೇಗೆ ನೋಡಿದರೂ ಎರಡು ಆರುಗಳೇ ಆಗುತ್ತಿವೆ. ಮೂರನೇ ಆರನ್ನು ಎಲ್ಲಿಂದ ತರಬೇಕು. ಇಲ್ಲಿ ಮೂರು ಆರುಗಳನ್ನು ಅಂದರೆ 666 ಎಂದು ಹೇಳುವುದು ಶಾಸ್ತ್ರಬದ್ಧತೆಯಾಗಲೀ, ಸೂತ್ರಬದ್ದತೆಯಾಗಲೀ ಯಾವುದೂ ಇಲ್ಲದ ವಿಷಯ. ಹಿಂದಿನಿಂದ ಮುಂದಕ್ಕೆ ನೋಡಿದರೂ, ಮುಂದಿನಿಂದ ಹಿಂದಕ್ಕೆ ನೋಡಿದರೂ ಆರುನೂರಾ ಅರವತ್ತಾರು (666) ಬರುವುದಿಲ್ಲ. ಕೇವಲ ಅರವತ್ತಾರು (66) ಮಾತ್ರವೇ ಬರುತ್ತದೆ. ಮಾನವನೊಂದಿಗೆ ಸಹ ಸೃಷ್ಟಿ ಎಲ್ಲವನ್ನೂ ತಯಾರು ಮಾಡುವುದಕ್ಕೆ ಕೇವಲ ಒಂದು ಆರು(6) ದಿನಗಳೇ ಬೇಕಾಗಿವೆಯೆಂದು, ನಂತರ ಸಾತಾನ್‌ನನ್ನು ತಯಾರಿಸುವುದಕ್ಕೆ ಮತ್ತೊಂದು ಆರು (6) ದಿನಗಳು ಬೇಕಾಗಿವೆ ಎಂದು ಹೇಳಿದಾಗ ಒಟ್ಟು 12 ದಿನಗಳೇ ಆಗುತ್ತದೆ. 12ನ್ನು ಎರಡು ಭಾಗಗಳಾಗಿ ಮಾಡಿದರೆ ಎರಡೂ ಆರುಗಳೇ ಆಗುತ್ತದೆ. ಆ ಲೆಕ್ಕ ಪ್ರಕಾರ 66 ಆಗುತ್ತದೆ. ಇಲ್ಲ ಅಲ್ಲ ಎಂದು ಸಾತಾನ್ ಹುಟ್ಟುವಿಕೆಯನ್ನು ಪ್ರತ್ಯೇಕವಾಗಿ ಹೇಳಿದಹಾಗೆ ಮನುಷ್ಯ ಹುಟ್ಟುವಿಕೆಯನ್ನು ಮಾತ್ರ ಪ್ರತ್ಯೇಕವಾದ ದಿನವಾಗಿ ಹೇಳುತ್ತಿದ್ದೇವೆಂದು, ಇದರ ಪ್ರಕಾರ ಭೂಮಿ ಗಿಡ ಪಕ್ಷಿಗಳೊಂದರ ಸೃಷ್ಟಿ ದಿನಗಳ ಸಂಖ್ಯೆ ಆರು (6) ಆದಾಗ, ಮನುಷ್ಯನ ಸೃಷ್ಟಿ ಪ್ರತ್ಯೇಕವಾಗಿ ಆರು (6)ಆದಾಗ, ಸಾತಾನು ವೊಂದರ ಹುಟ್ಟುವಿಕೆ ಮತ್ತೊಂದು ಆರು (6)

ಆಗಿದೆಯೆಂದು ಸಹ ಲೆಕ್ಕ ಸರಿಮಾಡಿ ಹೇಳಬೇಕೆಂದು ನೋಡಿದರೂ ಅದು ಸರಿಹೋಗದ ಲೆಕ್ಕವೇ ಆಗುತ್ತದೆ. ಹೇಗೆಂದರೆ! ಮನುಷ್ಯನನ್ನು ಬಿಟ್ಟು ಉಳಿದ ಸೃಷ್ಠಿಯನ್ನು ಐದು (5) ದಿನಗಳಾಗಿ ಲೆಕ್ಕಿಸಬೇಕಾಗಿ ಬರುತ್ತದೆ. ನಂತರ ಮನುಷ್ಯನನ್ನು ಒಂದು(1) ದಿನವಾಗಿ ಲೆಕ್ಕಿಸಿಕೊಳ್ಳಬೇಕಾಗುತ್ತದೆ. ಆ ನಂತರ ಸಾತಾನನ್ನು ಆರನೇ (6) ದಿನಕ್ಕೆ ಲೆಕ್ಕಿಸಬಹುದು. ಈ ಲೆಕ್ಕದ ಪ್ರಕಾರ ಮನುಷ್ಯನನ್ನು ಪ್ರತ್ಯೇಕವಾಗಿ ಹೇಳಿದರೆ 516 ಆಗುತ್ತದೆ. ಆಗ 666 ಎಂದು ಹೇಳದೆ 516 ಎಂದು ಹೇಳಬೇಕಲ್ಲ! 516 ಪ್ರಕಾರವಾದರೆ ಹನ್ನೆರಡು (12) ದಿನಗಳಿಗೆ ಸರಿಹೋಗುತ್ತದೆ.

ನಮ್ಮ ಲೆಕ್ಕ ಎಲ್ಲವೂ ಬಿಟ್ಟುಹಾಕಿ ಅತ್ತ ರಾವು ಅವರಾಗಲೀ, ಇತ್ತ ರಾಜು ಅವರಾಗಲೀ ಹೇಳಿದ ಲೆಕ್ಕಪ್ರಕಾರ ಆರುನೂರಾ ಅರವತ್ತಾರು (666) ಎನ್ನುವ ಸಂಖ್ಯೆಯೇ ಸರಿಯಾದದ್ದೆಂದುಕೊಳ್ಳೋಣ. ಆ ಸಂಖ್ಯೆಯನ್ನು ದೇವರ ಗುರುತಾಗಿ ಇಡುವುದಕ್ಕೆ ಆಧಾರವೇನಿದೆ? ಅದೆಲ್ಲವೂ ಪ್ರಕೃತಿ ಅದರಲ್ಲಿನ ಜೀವರಾಶಿಗಳು ತಯಾರಾದ ಸಂಖ್ಯೆಯಾದ್ದರಿಂದ ಅದು ಪ್ರಕೃತಿಗೆ ಅನ್ವಯಿಸುತ್ತದೆ, ಆದರೆ ದೇವರಿಗೆ ಹೇಗೆ ಅನ್ವಯಿಸುತ್ತದೆ? ಎಂದು ಕೇಳಿದರೆ ಅದಕ್ಕೆ ಉತ್ತರ ಇರುವುದಿಲ್ಲ.

ಹೀಗೆ ನಾವು ಪ್ರಶ್ನಿಸಿ ಕೇಳಿದ್ದೇವೆಂದರೆ ದೇವರ ವಿಷಯದಲ್ಲಿ ಅಡ್ಡ ಮಾತನಾಡುವ ಅಜ್ಞಾನಿಗಳಾಗಿ ನಮ್ಮನ್ನು ಅಂದುಕೊಳ್ಳಬಹುದು, ನೀವು ಬೈಬಲ್‌ನ್ನು ಓದಲಿಲ್ಲ, ಓದಿ ನೋಡಿರಿ ತಿಳಿಯುತ್ತದೆ ಎಂದು ಅನ್ನಬಹುದು, ದೇವರ ವಿಷಯದಲ್ಲಿ ಹೀಗೆ ಮಾತನಾಡುವುದರಿಂದ ಪಾಪಬರುತ್ತದೆನ್ನಬಹುದು. ಅದಕ್ಕೆ ಉತ್ತರವಾಗಿ ನಾನೂ ಅದೇ ಮಾತುಗಳನ್ನು ಹೇಳುತ್ತಿದ್ದೇನೆ. ನೀವು ಬೈಬಲ್ ಓದಲಿಲ್ಲ, ಒಂದುಬಾರಿ ಜಾಗ್ರತೆಯಾಗಿ ಓದಿರಿ ತಿಳಿಯುತ್ತದೆನ್ನುತ್ತಿದ್ದೇನೆ. ದೇವರ ವಿಷಯದಲ್ಲಿ ಭಯವಿಲ್ಲದೆ, ಅಡ್ಡವಾಗಿ ಅಸತ್ಯ ಮಾತುಗಳನ್ನು ಮಾತನಾಡಿದರೆ ಭಯಂಕರ ಪಾಪ ಬರುತ್ತದೆನ್ನುತ್ತಿದ್ದೇನೆ. ಬೈಬಲ್ ಎಂದಿಗೂ ಪರಿಶುದ್ಧ ಗ್ರಂಥವೇ. ಅದರಲ್ಲಿನ ಪರಿಶುದ್ಧತೆಯನ್ನು ಗ್ರಹಿಸದೆ, ಶಾಸ್ತ್ರಬದ್ದತೆ

ಇಲ್ಲದೇ ಮಾತನಾಡಿದರೆ, ಬೈಬಲ್‌ನ್ನು ದೇವರನ್ನು ಅಪರಿಶುದ್ದ ಮಾಡಿದಹಾಗಲ್ಲವೆ? ಬೈಬಲ್‌ನಲ್ಲಿ ಯೇಸುಪ್ರಭು ಚರಿತ್ರೆ ಇರುವ ನಾಲ್ಕು ಸುವಾರ್ತೆಗಳೇ ಆಣಿಮುತ್ತಿನಂತಹವು. ನಾಲ್ಕು ಸುವಾರ್ತೆಗಳಿಂದಲೇ ಅದು ಪರಿಶುದ್ಧ ಗ್ರಂಥವಾಗಿ ಕೀರ್ತಿಗೇರಿದೆ. ಅದರಲ್ಲಿನ ಯೇಸು ಪ್ರಭು ಮಾತುಗಳು ಅಂದಿಗೂ ಇಂದಿಗೂ ಎಂದಿಗೂ ಬೆಲೆ ಕಟ್ಟಲಾರದ ವಜ್ರಗಳಂತಹವು. ಅಷ್ಟು ಬೆಲೆಯುಳ್ಳ ಪ್ರಭುವೊಂದರ ಮಾತುಗಳನ್ನು ಬಿಟ್ಟು ಬೈಬಲ್‌ನ್ನು ಇಷ್ಟ ಬಂದಹಾಗೆ ಹೇಳಿಕೊಳ್ಳುವುದು ಮನುಷ್ಯರಾದವರಿಗೆ ಸರಿಯಾದ ಕೆಲಸವೇನಾ ಎನ್ನುತ್ತಿದ್ದೇವೆ? ನೇರವಾಗಿ ಸಾತಾನು ಸಂಖ್ಯೆಯಾದ ಆರುನೂರ ಅರವತ್ತಾರು (666) ಸಂಖ್ಯೆಯನ್ನು ದೇವರ ಸಂಖ್ಯೆಯಾಗಿ ಹೇಳುವುದು ಸರಿಯಾದ ಕೆಲಸವೇನಾ ಎಂದು ಕೇಳುತ್ತಿದ್ದೇನೆ.

ನಮಗೆ ಅರ್ಥವಾಗಲಿಲ್ಲ ವಿವರವಾಗಿ ಹೇಳಿರೆಂದು ಕೋಡ್‌ಆಗಿ ಹೇಳಿದ 666ನ್ನು ಕುರಿತು ಮೂವರು ಕೇಳಿದಾಗ ರಾಜು ಅವರು ಒಂದು ಉಪಮಾನವನ್ನು ಹೇಳಿದ್ದಾರೆ. "ಅಪರಾಧಿಗೆ ಜಡ್ಜಿ ಅವರು 112 ಎಂಬ ನಂಬರು ಕೊಟ್ಟಾಗ ಅದು ಜಡ್ಜಿದೇ ತಾನೆ! ಜಡ್ಜಿ ಕೊಟ್ಟಿರುವುದೇ ತಾನೇ! 112 ಅಪರಾಧಿಯದೇ ಆದರೂ ಆ ನಂಬರು ಜಡ್ಜಿಯದೇ" ಎಂದು ಹೇಳಬೇಕು. ಆದ್ದರಿಂದ ಆರುನೂರಾ ಅರವತ್ತಾರು (666)ನ್ನು ಸಾತಾನು ನಂಬರು ಅಲ್ಲ ಸೃಷ್ಟಿಕರ್ತನದೇ ಎನ್ನುತ್ತಿದ್ದೇವೆಂದು ವಿವರಿಸಿದ್ದಾರೆ. ಕೇಳಿರುವ ಮೂವರಿಗೂ ಆ ವಿಷಯ ತಪ್ಪು ಎಂದು ತಿಳಿದರೂ ಎದುರು ಮಾತನಾಡದೇ ಅದನ್ನು ಅಲ್ಲಿಗೆ ಬಿಟ್ಟುಹಾಕಿದ್ದಾರೆ. ಆದರೆ ನಾವು ಕೇಳುವುದೇನೆಂದರೆ? ರಾಜು ಅವರು ತನ್ನ ಬುದ್ಧಿವಂತಿಕೆಯಿಂದ ಹೇಳಿ ಒಪ್ಪಿಸಬೇಕೆಂದು ನೋಡಿದರೂ ಅದು ಸರಿಯಾದ ಉಪಮಾನ ಅಲ್ಲ, ಸರಿಯಾದ ಸಮಾಧಾನವೂ ಅಲ್ಲ. ಏಕೆಂದರೇ! 112 ಎಂದು ಕರೆದಾಗ ಅಪರಾಧಿ ಮಾತನಾಡುತ್ತಾನಾ? ಜಡ್ಜಿ ಮಾತನಾಡುತ್ತಾನಾ? ಯಾವ ವಿಧವಾಗಿ ನೋಡಿದರೂ ಅಪರಾಧಿಯೇ ಮಾತನಾಡುತ್ತಾನೆಂದು ಹೇಳಬಹುದು. ಒಂದು ವೇಳೆ 112  ಎಂಬ ನಂಬರನ್ನು ಜಡ್ಜಿ ಕೊಟ್ಟಿದ್ದರೂ

ಕೊಟ್ಟ ನಂತರ ಅದು ಖೈದೀ ನಂಬರೇ ಆಗುತ್ತದೆ ಆದರೇ ಜಡ್ಜಿ ನಂಬರು ಅಲ್ಲ. ಈತನು ಇಂತಹಾ ಖೈದೀ ಎಂದು ಗುರುತಿಸುವುದಕ್ಕೆ ಇಟ್ಟಿರುವ ನಂಬರೇ ಆಗಲೀ ಅದು ಜಡ್ಜಿಯನ್ನು ಗುರುತಿಸುವುದಕ್ಕಲ್ಲ. ಖೈದಿ ಪರವಾಗಿ ರಿಕಾರ್ಡ್‌ಲ್ಲಿ ಖೈದೀನಂಬರು 112 ಎಂದು ಬರೆಯುತ್ತಿದ್ದಾರಾಗಲೀ, ಜಡ್ಜಿ ನಂಬರಾಗಿ ರಿಕಾರ್ಡ್‌ಲ್ಲಿ ಬರೆಯಲಿಲ್ಲವಲ್ಲ! ಆ ವಿಧವಾಗಿಯೇ ಮಾಯೆ ಪರವಾಗಿ ಜಗತ್ತಿನಲ್ಲಿ ಹೇಳುತ್ತಿರುವಾಗ ಮಾಯೆ ನಂಬರು ಆರುನೂರಾ ಅರವತ್ತಾರು (666) ಎಂದು ಹೇಳುತ್ತಿದ್ದೇವೆ. ಖೈದೀನಂಬರನ್ನು ಖೈದೀನಂಬರಾಗಿ ಹೇಳದೆ ಆ ನಂಬರನ್ನು ಜಡ್ಜಿ ನಂಬರಾಗಿ ಹೇಳಿದರೆ ಎಷ್ಟು ತಪ್ಪಾಗುತ್ತದೊ ಹಾಗೆ ಮಾಯೆ ನಂಬರನ್ನು ಮಾಯೆನಂಬರಾಗಿ ಹೇಳದೇ ಸೃಷ್ಠಿಕರ್ತ (ದೇವರ) ನಂಬರಾಗಿ ಹೇಳುವುದು ಅಷ್ಟೇ ತಪ್ಪಾಗುತ್ತದೆ. ಸೃಷ್ಠಿಕರ್ತ ನಂಬರು 666 ಎನ್ನುವುದು ಸರಿಯಾದದ್ದೇನಾ ಎಂದು ಬಹಳ ಜನ ಕ್ರೈಸ್ತ ಬೋಧಕರಾದ ಫಾದರ್‌ಗಳನ್ನು, ಪಾಸ್ಟರ್‌ಗಳನ್ನು ಮತ್ತೂ ಕೆಲವು ಮಂದಿ ಕ್ರೈಸ್ತರನ್ನು ವಿವರಿಸಿ ಕೇಳಿದರೆ ಆರುನೂರಾ ಅರವತ್ತಾರು (666) ಸಾತಾನ್ (ಮಾಯೆ) ನಂಬರೇ ಎಂದು ಒಪ್ಪಿಕೊಳ್ಳುತ್ತಿದ್ದಾರೆ. ಈ ಪ್ರಕಾರ ರಾಜು ಅವರಾಗಲಿ ಅವರ ಗುರುಗಳಾದ ರಾವು ಅವರಾಗಲೀ ಮಾತನಾಡಿದ ಸೃಷ್ಠಿಕರ್ತಕೋಡ್ 666 ಎನ್ನುವ ವಿಷಯ ಪೂರ್ತಿ ತಪ್ಪು ಎಂದು ತಿಳಿದುಹೋಗುತ್ತಿದೆ. ದೈವಜ್ಞಾನಿ, ಆತ್ಮಜ್ಞಾನಿ, ಜಯಶಾಲಿ ಎನ್ನುವ ಹೆಸರು ಇಟ್ಟುಕೊಂಡ ರಾವು ಅವರು ಹೇಳುವುದು ಅದನ್ನು ರಾಜು ಅವರು ಬರೆಯುವುದು ದೇವರಿಗೆ ವಿರುದ್ಧವಾದ ಕೆಲಸ ಅಲ್ಲವೇ?

ರಾಜು ಅವರು ತನ್ನ ಮಾತುಗಳಲ್ಲಿ ದೇವರಿಗೆ ಅನೇಕ ನಿವಾಸಗಳಿವೆ ಎಂದಿದ್ದಾನೆ. ಆ ನಿವಾಸಗಳಲ್ಲಿ ಕೆಲವರನ್ನು ದೇವರಿಟ್ಟಿದ್ದಾನೆಂದು ಸಹ ಹೇಳಿದ್ದಾನೆ. ಇದನ್ನನುಸರಿಸಿ ನೋಡಿದರೆ ದೇವರದು ಎಲ್ಲೋ ಪಕ್ಕದಲ್ಲಿರುವ ಪ್ರದೇಶವೆಂದು, ಪ್ರತ್ಯೇಕವಾದ ಪ್ರದೇಶ ಸ್ವಲ್ಪ ಮೇರೆ ವ್ಯಾಪಿಸಿದೆಯೆಂದು, ಅದೆಲ್ಲವೂ ದೇವರ ಸಾಮ್ರಾಜ್ಯವೆಂದು, ಅಲ್ಲಿ ಸುಂದರವಾದ ಭವಂತಿಗಳು ಇವೆಯೆಂದು ಅರ್ಥವಾಗುತ್ತಿದೆ. ಇದರ ಪ್ರಕಾರ ದೇವರ ರಾಜ್ಯಕ್ಕೆ ಎಲ್ಲೆಗಳಿವೆಯೆಂದು ಸಹ

ತಿಳಿಯುತ್ತಿದೆ. ಇದೆಲ್ಲವೂ ರಾಜು ಅವರ ಭಾವನೆ ಪ್ರಕಾರವಿದೆ. ನಾವು ಹೇಳುವುದೇನೆಂದರೆ! ದೇವರು ಸರ್ವವ್ಯಾಪಿ, ಅಣುಅಣುವಿನಲ್ಲೂ ವ್ಯಾಪಿಸಿ ಪರಮಾಣುವಿನಲ್ಲಿಯೂ ಸಹ ಇದ್ದಾನೆ. ತಾನು ಇಲ್ಲದ ಸ್ಥಳವಾಗಲೀ, ತಾನು ನೋಡದ ಯಾವುದಾಗಲೀ ಇಲ್ಲ. ಆದ್ದರಿಂದ ದೇವರನ್ನು ಸರ್ವವ್ಯಾಪಿ, ಸರ್ವದರ್ಶಿ ಎಂದು ಅನ್ನುತ್ತಿದ್ದೇವೆ. ಭೂಮಿಯಾಗಲಿ, ಆಕಾಶವಾಗಲಿ, ನಕ್ಷತ್ರಗೋಳಗಳಾಗಲಿ, ಸೂರ್ಯಮಂಡಲಗಳಾಗಲೀ ಎಲ್ಲದರಲ್ಲೂ ದೇವರು ವ್ಯಾಪಿಸಿದ್ದಾನೆ. ಆದ್ದರಿಂದ ವಿಶ್ವವೆಲ್ಲಾ ಆತನ ರಾಜ್ಯವೇ. ವಿಶ್ವಕ್ಕೆಲ್ಲಾ ಆತನೇ ಅಧಿಪತಿ. ದೇವರ ರಾಜ್ಯವಲ್ಲದೇ ಇನ್ನೊಂದಿಲ್ಲ ಆದ್ದರಿಂದ ದೇವರ ರಾಜ್ಯಕ್ಕೆ ಎಲ್ಲೆಗಳು ಇಲ್ಲವೆಂದು ಹೇಳಬಹುದು. ದೇವರು ನಿರಾಕಾರನು ಆತನು ಪ್ರಾಣವಿರುವವುಗಳಲ್ಲಿಯೂ ಪ್ರಾಣವಿಲ್ಲದವುಗಳಲ್ಲಿಯೂ ಸಹ ಅಣು ಅಣುವಿನಲ್ಲೂ ವ್ಯಾಪಿಸಿದವನು, ಎಲ್ಲಾಕಡೆ ಇರುವವನು ದೇವರು ಆದ್ದರಿಂದ ಆತನಿಗೆ ಅನೇಕ ನಿವಾಸಗಳಿವೆ ಎಂದಿದ್ದಾರೆ. ಅನೇಕ ಎಂದರೆ ಒಂದಕ್ಕಿಂತ ಹೆಚ್ಚು ಎಂದು ಅರ್ಥ. ಆದರೆ ಕೆಲವು ಎಂದು ಅರ್ಥ ಮಾಡಿಕೊಳ್ಳಬಾರದು. ಕೆಲವು ತನ್ನವೆಂದರೆ ಮತ್ತೆ ಕೆಲವು ತನ್ನವಲ್ಲವೆಂದೇ ಅರ್ಥ. ಆದ್ದರಿಂದ ಕೆಲವು ಅಲ್ಲದೇ ಎಲ್ಲಾ ನಿವಾಸಗಳು ಆತನವೇ. ಆತನು ನಿವಾಸವಿಲ್ಲದ ಯಾವ ಅಣುವು ಸಹ ಇಲ್ಲ. ಪ್ರತಿ ಪದಾರ್ಥದಲ್ಲಿಯೂ ಸಾಕ್ಷಿಯಾಗಿ ದೇವರಿದ್ದಾನೆ.

ಸರ್ವವ್ಯಾಪಿ, ಸರ್ವದರ್ಶಿ ಆದ ದೇವರಿಗೆ ಸಾತಾನು ಮುಖ್ಯವಾದ ಕೆಲಸದ ಮನುಷ್ಯ ಎಂದು, ಸಾತಾನು ದೇವರನ್ನು ಮೋಸ ಮಾಡಿದ್ದಾನೆಂದು ರಾಜು ಅವರು ಹೇಳಿದ್ದಾರೆ. ದೇವರೇನಾದರೂ ಒಬ್ಬ ಮನುಷ್ಯನಂತವನಾ ಆತನನ್ನು ಸಾತಾನು ಮೋಸ ಮಾಡುವುದಕ್ಕೆ. ರೂಪವಾಗಲೀ, ನಾಮವಾಗಲೀ, ಕ್ರಿಯೆಗಳಾಗಲೀ ಇಲ್ಲದ ದೇವರಿಗೆ ಮನೆ, ಮನೆಯಲ್ಲಿ ಕೆಲಸ ಇರುತ್ತದಾ? ಆತನು ಮಾಡಬೇಕಾದ ಕೆಲಸವಾಗಲೀ, ಆತನಿಗೆ ಬೇಕಾದ ಕೆಲಸವಾಗಲೀ ಏನೂ ಇಲ್ಲ. ಯಾವಾಗಾದರೂ ಮನುಷ್ಯರಿಗೆ ತನ್ನ ಧರ್ಮಗಳನ್ನು ತಿಳಿಸುವುದಕ್ಕೆ ತನ್ನ ಕುಮಾರನ ರೂಪದಲ್ಲಿ ತನ್ನ ಪ್ರತಿನಿಧಿಯಾಗಿ ಒಬ್ಬ ಮನುಷ್ಯನನ್ನು

ಭೂಮಿ ಮೇಲೆಗೆ ಕಳುಹಿಸುವನು. ಭೂಮಿ ಮೇಲಿರುವ ತನ್ನ ಪುತ್ರನು ಮನುಷ್ಯರಿಗೆ ಬೇಕಾದ ಜ್ಞಾನವನ್ನು ಬೋಧಿಸಿ ಪುನಃ ತಂದೆಯೊಳಗೇ ಸೇರಿಹೋಗುವನು. ತಂದೆಯಾದ ದೇವರು ಕುಮಾರನಾದ ಪ್ರವಕ್ತ ಬಿಡಿಬಿಡಿಯಾಗಿ ಇದ್ದರೂ ಇಬ್ಬರೂ ಒಂದೇ. ಆದ್ದರಿಂದ ನನ್ನ ತಂದೆ ಮಾತುಗಳು ನನ್ನ ಮಾತುಗಳು ಎರಡೂ ಒಂದೇ ಎಂದು, ನನ್ನನ್ನು ನೋಡಿದವನು ನನ್ನ ತಂದೆಯನ್ನು ನೋಡಿದಹಾಗೇ ಎಂದು ಪ್ರಭುವು ಹೇಳಿದ್ದಾನೆ. ಪ್ರಭುವು ಸತ್ತುಹೋದ ನಂತರ ದೇವರಲ್ಲಿ ಐಕ್ಯವಾಗಿ ಹೋಗಿದ್ದಾನೆ. ಆದ್ದರಿಂದ ನಾನು ಹೋಗುವ ಕಡೆ ನೀವ್ಯಾರೂ ಬರಲಾರರೆಂದು ಮನುಷ್ಯರೊಂದಿಗೆ ಹೇಳಿದ್ದಾನೆ. ದೇವರು ಕೆಲವು ಸಾವಿರ ಯುಗಗಳಿಗೆ ಒಂದುಬಾರಿ ಭೂಮಿ ಮೇಲೆಗೆ ಮನುಷ್ಯ ರೂಪದಲ್ಲಿ ಬಂದು ಜ್ಞಾನವನ್ನು ಬೋಧಿಸಿ ಹೋಗುವನು. ಆತನಿಗೆ ಅದಕ್ಕಿಂತ ಬೇರೆ ಕೆಲಸವಿಲ್ಲ. ಅಂತಹ ದೇವರಿಗೆ ಕೆಲಸದ ಮನುಷ್ಯರೆಂದು ಹೇಳುವುದೂ, ಕೆಲಸದ ಮನುಷ್ಯನಾದ ಸಾತಾನು ದೇವರನ್ನು ಮೋಸ ಮಾಡಿದ್ದಾನೆನ್ನುವುದು ವಾಸ್ತವ ವಿಷಯವಾಗುತ್ತದಾ? ಅಷ್ಟೇ ಅಲ್ಲದೇ ಕೆಲಸದ ಮನುಷ್ಯರು ತನ್ನನ್ನು ಮೋಸ ಮಾಡುತ್ತಾರೆಂದು, ದೇವರು ತನ್ನ ಸ್ವಂತ ಕುಮಾರರನ್ನು ಹುಟ್ಟಿಸಿಕೊಳ್ಳಬೇ ಕೆಂದುಕೊಂಡಿದ್ದಾನೆಂದು ರಾಜು ಅವರು ಹೇಳುವುದು ಇನ್ನೂ ವಿಚಿತ್ರವಾಗಿ ಇದೆ. ಇದನ್ನು ಕುರಿತು ನಾವೇನೆನ್ನುತ್ತಿದ್ದೇವೆಂದರೇ! ಸಮಸ್ತ ಜೀವಕೋಟಿ ದೇವರ ಸಂತಾನವಾಗಿ ಇದೆ. ಸೃಷ್ಠಿಕರ್ತ ದೇವರಾದಾಗ ಎಲ್ಲರಿಗೂ ಆತನು ತಂದೆ ಆಗದೇ ಏನಾಗುತ್ತಾನೆ. ಜಗತಿ ಎಲ್ಲಾ ಆತನ ಸಂತಾನವೇ ಆದಾಗ ಸ್ವಂತ ಕುಮಾರರನ್ನು ಹುಟ್ಟಿಸಿಕೊಳ್ಳಬೇಕೆಂದುಕೊಳ್ಳುವುದೇನು? ದೇವರನ್ನು ದೊಡ್ಡದಾಗಿ ಹೋಲಿಸಿಕೊಳ್ಳದೇ ನಮ್ಮ ಹಾಗೆ ಹೋಲಿಸಿಕೊಂಡರೆ ಮನೆ, ಮನೆಯಲ್ಲಿ ಕೆಲಸದ ಮನುಷ್ಯರೂ, ಸ್ವಂತ ಕುಮಾರರು ಇರಬಹುದು. ದೇವರಿಗೆ ಒಂದು ಮನೆಯಾಗಲೀ, ಕೆಲಸದ ಮನುಷ್ಯರಾಗಲೀ, ಸ್ವಂತ ಕುಮಾರರಾಗಲೀ ಯಾರೂ ಇಲ್ಲವೆಂದು ತಿಳಿಯಬೇಕು. ದೇವರ ಮಾರ್ಗದಲ್ಲಿ ಇಲ್ಲದೇ, ದೇವರ ಜ್ಞಾನವನ್ನು ಅನುಸರಿಸದೆ, ಮಾಯೆ (ಸಾತಾನ್) ಮಾರ್ಗದಲ್ಲಿ ನಡೆಯುವವನನ್ನು ಸರ್ಪ ಸಂತಾನವೆಂದು ಹೇಳಿದ್ದಾರೆ. ಸರ್ಪ ಮಾಯೆಗೆ ಗುರುತು ಆದ್ದರಿಂದ

ಮಾಯೆಯಲ್ಲಿರುವವರನ್ನು ಸರ್ಪಸಂತಾನವೆಂದಿದ್ದಾರೆ. ಸರ್ಪ ಸಂತಾನ ಎನ್ನಲ್ಪಡುವವರು ದೇವರ ಸಂತತಿಯವರೆಂದೇ ತಿಳಿಯಬೇಕು. ಬೈಬಲ್‌ನಲ್ಲಿ ಆತ್ಮಕ್ಕೆ ಗುರುತಾಗಿ ಪಾರಿವಾಳವನ್ನೂ (ಪಕ್ಷಿಯನ್ನು), ಮಾಯೆಗೆ ಗುರುತಾಗಿ (ಕೊಂಡಶಿಲುವ) ಹಾವನ್ನು (ಸರ್ಪವನ್ನು) ಹೇಳಿಕೊಂಡಿದ್ದೇವೆ. ಇದರ ಪ್ರಕಾರ ದೈವಮಾರ್ಗದಲ್ಲಿರುವವರು ಪಕ್ಷಿಸಂತಾನವೆಂದೂ, ಮಾಯೆ ಮಾರ್ಗ ದಲ್ಲಿರುವ ವರು ಸರ್ಪಸಂತಾನವೆಂದು ಗುರುತಿಗಾಗಿ ಹೇಳಿರುವುದೇ. ಪಕ್ಷಿ ಸಂತಾನ ಹಾವು ಸಂತಾನ ಎರಡೂ ದೇವರ ಸಂತಾನವೇ ಎಂದು ತಿಳಿಯಬೇಕು. ಯಾವ ವಿಧವಾಗಿ ಜ್ಞಾನಿಯನ್ನು ನೋಡಿದಾಗ ದೇವರ ಸಂಖ್ಯೆ 963ನ್ನು, ಅಜ್ಞಾನಿಯನ್ನು ನೋಡಿದಾಗ ಮಾಯೆಸಂಖ್ಯೆ 666ನ್ನು ಗುರುತು ಮಾಡಿ ಕೊಳ್ಳುವಹಾಗೆ, ಸಾತಾನ್ (ಮಾಯೆ) ಮಾರ್ಗದಲ್ಲಿನವರನ್ನು ಸರ್ಪಸಂತಾನ ಎನ್ನುತ್ತಿದ್ದೇವೆ.

ವಿಶ್ವ ಸೃಷ್ಟಿಯನ್ನು ಕುರಿತು ಬೈಬಲ್ ಹಳೇ ಒಡಂಬಡಿಕೆ ಆದಿಕಾಂಡದಲ್ಲಿ ಮೊದಲನೆಯ ಅಧ್ಯಾಯದಲ್ಲಿ ನೋಡಿರಿ ಎಂದು ರಾಜು ಅವರು ಹೇಳಿದ್ದಾನೆ. ಆತನ ಮಾತಿನ ಪ್ರಕಾರ ಆದಿಕಾಂಡದಲ್ಲಿನ ಆದಿ ಅಧ್ಯಾಯದಲ್ಲಿ ಒಂದರಿಂದ ಐದು ವಾಕ್ಯಗಳವರೆಗು ಓದಿದರೆ ಈ ವಿಧವಾಗಿ ಇದೆ. "1. ಆದಿಯಲ್ಲಿ ದೇವರು ಭೂಮ್ಯಾಕಾಶಗಳನ್ನು ಸೃಜಿಸಿದನು. 2. ಭೂಮಿ ನಿರಾಕಾರವಾಗಿಯೂ ಶೂನ್ಯವಾಗಿಯೂ ಇತ್ತು. ಕತ್ತಲು ಅಗಾಧ ಜಲದ ಮೇಲೆ ಆವರಿಸಿತ್ತು. ದೇವರ ಆತ್ಮ ಜಲಗಳ ಮೇಲೆ ಅಲುಗಾಡುತ್ತಿತ್ತು. 3. ದೇವರು ಬೆಳಕಾಗಲಿ ಎಂದಾಗ ಬೆಳಕಾಯಿತು. 4. ಬೆಳಕು ಒಳ್ಳೆಯದಾದಹಾಗೆ ದೇವರು ನೋಡಿದನು. ದೇವರು ಬೆಳಕನ್ನು ಕತ್ತಲನ್ನು ಬೇರೆ ಮಾಡಿದನು. 5. ದೇವರು ಬೆಳಕನ್ನು ಹಗಲೆಂದೂ, ಕತ್ತಲನ್ನು ರಾತ್ರಿಯೆಂದು ಹೆಸರು ಇಟ್ಟಿದ್ದಾನೆ. ಅಸ್ತಮಯ ಉದಯ ಉಂಟಾಗಿ ಒಂದು ದಿನವಾಯಿತು." ಈ ಐದು ವಾಕ್ಯಗಳು ಬೈಬಲ್‌ನಲ್ಲಿ ಮೊಟ್ಟಮೊದಲ ವಾಕ್ಯಗಳು. ಇಲ್ಲಿ ನಾವು ಕೇಳುವುದೇನೆಂದರೆ! ಮೊದಲು ಭೂಮಿ ನಿರಾಕಾರವಾಗಿಯೂ ಶೂನ್ಯವಾಗಿಯೂ ಇರುವಾಗ, ಅಗಾಧಜಲದಮೇಲೆ

ಕತ್ತಲು ಆವರಿಸಿದಾಗ, ದೇವರ ಆತ್ಮ ಜಲದಮೇಲೆ ಅಲುಗಾಡುತ್ತಿತ್ತು. ಎಂದು ಬರೆಯಲಾಗಿದೆಯಲ್ಲ! ಅಲ್ಲಿ ಹೇಳಿದ್ದನ್ನು ಊಹಿಸಿಕೊಂಡರೆ ಅಗಾಧವಾದ ಜಲಗಳು ಅವುಗಳ ಮೇಲೆ ಗಾಢವಾದ ಕತ್ತಲೂ ಕತ್ತಲಲ್ಲಿ ದೇವರ ಆತ್ಮ ನೀರಿನ ಮೇಲೆ ತೇಲಾಡುವುದು ಎಲ್ಲಾ ಒಂದು ದೃಶ್ಯರೂಪವಾಗಿ ಬುದ್ಧಿಗೆ ಗೋಚರಿಸುತ್ತಿದೆ. ಇದೆಲ್ಲವನ್ನೂ ಮೊದಲು ಯಾರಾದರೂ ನೋಡಿದ್ದರೆ ತಾನೆ ಅಲ್ಲಿನ ಪರಿಸ್ಥಿತಿಯನ್ನು ವರ್ಣಿಸಿ ಹೇಳುವುದು. ಸೃಷ್ಠಿಗಿಂತಲೂ ಮೊದಲು ಯಾರಿದ್ದಾರೆ? ಅಲ್ಲಿರುವವನು ಯಾರೋ ಕತ್ತಲನ್ನು ಜಲಗಳನ್ನು, ಜಲಗಳ ಮೇಲೆ ದೇವರನ್ನು ನೋಡಿರಬೇಕು. ಅಷ್ಟು ಕತ್ತಲಲ್ಲಿಯೂ ಬೆಳಕು ಇಲ್ಲದಿರುವಾಗ ಜಲಗಳನ್ನು ದೇವರನ್ನು ನೋಡಿದವನು, ದೇವರ ಸೃಷ್ಠಿಗಿಂತ ಮುಂದಿರುವವನು ಯಾರೋ ಆಗಲಿ ಅವನು ಸೃಷ್ಠಿಗಿಂತ ಮೊದಲೂ, ದೇವರಿಗಿಂತಾ ದೊಡ್ಡವನಾಗಿರಬೇಕು. ಹಾಗೆ ಸೃಷ್ಠಿಗಿಂತ ಮೊದಲು ಇದ್ದು ಕತ್ತಲಲ್ಲೇ ದೇವರನ್ನು ಮೊದಲೇ ನೋಡಿದವನು ಯಾವನಾದರೂ ಇರಬಲ್ಲನಾ? ಈ ವಿಷಯವನ್ನು ಕುರುಡರಾಗಿ ನಂಬದೆ ಪ್ರತಿ ಕ್ರೈಸ್ತನೂ, ಪ್ರತಿ ಮನುಷ್ಯ ಆಲೋಚಿಸಬೇಕಾದ್ದೇ. ಹೀಗೆ ಮೊದಲು ಹೇಳಿದ ಎರಡೂ ವಾಕ್ಯಗಳು ದೇವರನ್ನು ಘನಪಡಿಸುತ್ತವಾ? ಹೀನಪಡಿಸುತ್ತವಾ? ಎಂದು ಯೋಚಿಸಿದರೆ ಇದರಲ್ಲಿ ದೇವರನ್ನು ಘನಪಡಿಸುವ ವಿಧಾನ ಇಲ್ಲ. ದೇವರಿಗಿಂತ ಮೊದಲೇ, ಸೃಷ್ಠಿಗಿಂತ ಮೊದಲೇ, ಮತ್ತೊಬ್ಬನನ್ನು ಘನಪಡಿಸಿದಹಾಗಿದೆ. ದೇವರಿಗಿಂತ ದೊಡ್ಡವರು ಯಾರೂ ಇಲ್ಲವೆಂದು ನಂಬಿದ ವಿಶ್ವಾಸಿಗಳಲ್ಲಿ ಸಹ ಅನುಮಾನವನ್ನು, ಅವಿಶ್ವಾಸವನ್ನು ಉಂಟುಮಾಡುವಹಾಗೆ ಮೊದಲಿನಲ್ಲೇ ಎರಡು ವಾಕ್ಯಗಳು ಇವೆ. ಯಾವುದೇನಾದರೂ ಸೃಷ್ಠಿ ಪೂರ್ವದಲ್ಲಿದ್ದು ನೋಡಿದವನ್ಯಾರೋ ಯಾರಾದರೂ ಹೇಳಬಲ್ಲಿರಾ! ಯಾರೂ ಹೇಳಲಾರರು.

ಎಲ್ಲಿಯೂ ಖಂಡಿಸಲ್ಪಡದಿರುವುದು ದೇವರ ಜ್ಞಾನ. ದೇವರ ಜ್ಞಾನವನ್ನು ತಿಳಿದವನು ಜ್ಞಾನ ವಿಷಯದಲ್ಲಿ ಯಾರು ಯಾವ ಪ್ರಶ್ನೆ ಕೇಳಿದರೂ ಉತ್ತರ ಹೇಳುವ ಸಾಮರ್ಥ್ಯ ಹೊಂದಿರುವನು. ದೇವರ ಜ್ಞಾನದ ಪ್ರಕಾರ ಉತ್ತರ

ಹೇಳಿದರೆ ಅದನ್ನು ಪದ್ಧತಿ ಪ್ರಕಾರ ಮಾತನಾಡುವವರು ಯಾರೂ ಅಲ್ಲಗಳೆದು ಹೇಳಲಾರನು, ಖಂಡಿಸಿ ಮಾತನಾಡಲಾರನು. ಆ ವಿಷಯವನ್ನೇ ಯೇಸುಪ್ರಭು ಹೇಳಿದಹಾಗೆ ಲೂಕಾ ಸುವಾರ್ತೆ 21ನೇ ಅಧ್ಯಾಯ 15ನೇ ವಚನದಲ್ಲಿ ಇದೆ. **"ನಿಮ್ಮ ವಿರೋಧಿಗಳೆಲ್ಲರು ಎದುರಾಡುವುದಕ್ಕು ಅಲ್ಲವೆನ್ನುವುದಕ್ಕು ಅವಕಾಶವಿಲ್ಲದ ವಾಕ್ಕನ್ನು ಜ್ಞಾನವನ್ನು ನಾನು ನಿಮಗೆ ಅನುಗ್ರಹಿಸುವೆನು"** ಅಷ್ಟೇ ಅಲ್ಲದೇ **"ಆಕಾಶ, ಭೂಮಿಯು ಗತಿಸುವುದು ಆದರೇ ನನ್ನ ಮಾತುಗಳು ಗತಿಸುವುದಿಲ್ಲ"** ಎಂದು ಪ್ರಭುವು ಮತ್ತಾಯ ಸುವಾರ್ತೆ 24ನೇ ಅಧ್ಯಾಯ, 35ನೇ ವಚನದಲ್ಲಿ ಹೇಳಿದ್ದಾನೆ. ಈ ವಿಧವಾಗಿ ಪ್ರಭುವು ಹೇಳಿದ ಜ್ಞಾನ ಎಲ್ಲಿಯೂ ಖಂಡಿಸಲಾರದೆ ಪೂರ್ತಿಯಾಗಿ ಶಾಸ್ತ್ರಬದ್ಧವಾಗಿ ಇರುತ್ತದೆಂದು ತಿಳಿಯುತ್ತದೆ. ಬೈಬಲ್‌ನಲ್ಲಿ ಅದೂ ಹೊಸ ಒಡಂಬಡಿಕೆಯಲ್ಲಿರುವ ಪ್ರಭುವೊಂದರ ಮಾತುಗಳು ಇರುವ ನಾಲ್ಕು ಸುವಾರ್ತೆಗಳಲ್ಲಿನ ಜ್ಞಾನವನ್ನು ಯಾರೂ ಖಂಡಿಸುವುದಕ್ಕೆ ಆಗುವುದಿಲ್ಲ. ಏಕೆಂದರೆ ಅವು ಸ್ವತಃವಾಗಿ ದೇವರು ಹೇಳಿದ ವಾಕ್ಯಗಳು. ಇಲ್ಲಿ ದೇವರು ಹೇಳಿದ್ದಾನಾ? ಪ್ರಭುವು ತಾನೆ ಹೇಳಿರುವುದು ಎಂದು ಅಂದುಕೊಳ್ಳದೇ ಈ ವಿಷಯದಲ್ಲಿ ಯಾರಿಗೂ ಅನುಮಾನ ಬಾರದೇ ಮೊದಲೇ ಪ್ರಭುವು ಈ ವಿಧವಾಗಿ ಹೇಳಿದ್ದಾನೆ. ಯೋಹಾನು ಸುವಾರ್ತೆ, 7ನೇ ಅಧ್ಯಾಯ, 16ನೇ ವಾಕ್ಯದಲ್ಲಿ **"ನಾನು ಮಾಡುವ ಬೋಧನೆ ನನ್ನದಲ್ಲ. ನನ್ನನ್ನು ಕಳುಹಿಸಿದವನದೇ"** ಈ ಎರಡು ವಾಕ್ಯಗಳನ್ನು ನೋಡಿದರೆ ದೇವರ ವಾಕ್ಯಗಳು ಎಷ್ಟು ಬಲವಾದವೋ ಅರ್ಥವಾಗುತ್ತಿದೆ. ಯಾವ ನಾಸ್ತಿಕವಾದಿಯಾಗಲಿ, ಯಾವ ಹೇತುವಾದಿಯಾಗಲಿ ಖಂಡಿಸುವುದಕ್ಕೆ ಸಾಧ್ಯವಿಲ್ಲದ ವಾಕ್ಯಗಳಾಗಿ ಇವೆ. ಆದರೆ ಪ್ರಭು ಮಾತುಗಳನ್ನು ಬಿಟ್ಟು ಉಳಿದ ಬೈಬಲ್ ಎಲ್ಲವನ್ನೂ ನೋಡಿದರೆ ಅದರಲ್ಲಿ ದೇವರ ಮೇಲೆಯೇ ಅನುಮಾನವನ್ನು ಉಂಟುಮಾಡುವ ವಾಕ್ಯಗಳು ಇವೆ. ಆದ್ದರಿಂದ ಬೈಬಲ್‌ನಲ್ಲಿ ಪರಿಶುದ್ಧತೆ ಅಂದರೆ ಪ್ರಭು ಜ್ಞಾನವಿರುವ ನಾಲ್ಕು ಸುವಾರ್ತೆಗಳಲ್ಲೇ ಇದೆಯೆಂದು ನಾವು ಹೇಳುತ್ತಿದ್ದೇವೆ. ಬೈಬಲ್ ಪರಿಶುದ್ಧ ಗ್ರಂಥ, ಮಹಿಮೆ ಇರುವ ಗ್ರಂಥ ಎನ್ನುವುದಕ್ಕೆ ನಾಲ್ಕು ಸುವಾರ್ತೆಗಳೇ ಮುಖ್ಯಕಾರಣ. ಪ್ರಭುವು ನುಡಿದ ಮಾತುಗಳ ಮುಂದೆ ಉಳಿದ ಬೈಬಲ್ ಎಲ್ಲಾ ಸಾರವಿಲ್ಲದ್ದೇ ಎಂದು ಹೇಳಬಹುದು.

ಆದ್ದರಿಂದ ಉಳಿದ ಬೈಬಲ್‌ನಲ್ಲಿನ ವಿಷಯಗಳನ್ನು ಯಾರಾದರೂ ವಿಮರ್ಶಿಸುವುದಕ್ಕು ಖಂಡಿಸುವುದಕ್ಕು ಅವಕಾಶವಿದೆ. ಆದರೆ ಬೈಬಲ್ ಹೊಸ ಒಡಂಬಡಿಕೆಯಲ್ಲಿನ ನಾಲ್ಕು ಸುವಾರ್ತೆಗಳನ್ನು ಯಾರೂ ಖಂಡಿಸಲಾರರೆಂದು ಹೇಳಬಹುದು. ಉಳಿದ ಬೈಬಲ್ ಹೇಗೆ ಹೇತುವಾದಿಗಳ ವಿಮರ್ಶೆಗೆ ಒಳಗಾಗುತ್ತಾ ಇದೆಯೋ ವಿವರಿಸಿಕೊಂಡು ನೋಡೋಣ. ಬೈಬಲ್‌ನಲ್ಲಿ ಮೊಟ್ಟಮೊದಲು ಪ್ರಾರಂಭದಲ್ಲೇ ಮೊದಲನೆಯ ಅಧ್ಯಾಯ ಒಂದು ಎರಡು ವಾಕ್ಯಗಳೇ ಅನುಮಾನವನ್ನು ಉಂಟುಮಾಡಿ ಅವಿಶ್ವಾಸ ಬೀಜವನ್ನು ನಾಟುತ್ತಿವೆ.

ಇನ್ನೂ ನೋಡಿದರೆ ದೇವರು ಸಮಸ್ತ ಸೃಷ್ಠಿಯನ್ನು ಆರುದಿನಗಳಲ್ಲಿ ಸೃಷ್ಠಿಸಿದ್ದಾನೆಂದು ಆದಿಕಾಂಡ ಮೊದಲನೇ ಅಧ್ಯಾಯದಲ್ಲಿ ಇದೆ. ಮೊದಲ ಅಧ್ಯಾಯವೆಲ್ಲಾ ಇರುವ 31 ವಚನಗಳು, ನಂತರ ಎರಡನೇ ಅಧ್ಯಾಯದಲ್ಲಿ 7ನೇ ವಚನದ ವರೆಗು ನೋಡಿದರೆ ಎಷ್ಟು ಲೋಪಭೂಯಿಷ್ಟವಾಗಿ ಇದೆಯೋ ನೋಡಿ. **1)ಆದಿಯಲ್ಲಿ ದೇವರು ಭೂಮ್ಯಾಕಾಶಗಳನ್ನು ಸೃಜಿಸಿದನು. 2) ಭೂಮಿ ನಿರಾಕಾರವಾಗಿಯೂ ಶೂನ್ಯವಾಗಿಯೂ ಇತ್ತು. ಕತ್ತಲು ಅಗಾಧಜಲದ ಮೇಲೆ ಆವರಿಸಿತ್ತು. ದೇವರ ಆತ್ಮ ಜಲಗಳ ಮೇಲೆ ಅಲುಗಾಡುತ್ತಿತ್ತು. 3) ದೇವರು ಬೆಳಕು ಆಗೆಂದು ನುಡಿದಾಗ ಬೆಳಕಾಯಿತು. 4) ಬೆಳಕು ಒಳ್ಳೆಯದು ಆದಹಾಗೆ ದೇವರು ನೋಡಿದನು. ದೇವರು ಬೆಳಕನ್ನು ಕತ್ತಲನ್ನು ಬೇರೆ ಮಾಡಿದನು. 5) ದೇವರು ಬೆಳಕಿಗೆ ಹಗಲೆಂದು, ಕತ್ತಲಿಗೆ ರಾತ್ರಿ ಎಂದು ಹೆಸರಿಟ್ಟನು. ಅಸ್ತಮಯವೂ ಉದಯವೂ ಆದಾಗ ಒಂದು ದಿನವಾಯಿತು.**

**6) ಮತ್ತು ದೇವರು ಜಲಗಳ ಮಧ್ಯದಲ್ಲಿ ಒಂದು ವಿಶಾಲಭಾಗಹೊಂದಿ ಆ ಜಲವನ್ನು ಈ ಜಲವನ್ನು ಬೇರೆ ಆಗೆಂದು ನುಡಿದನು. 7) ದೇವರು ಆ ವಿಶಾಲವನ್ನು ಮಾಡಿ ವಿಶಾಲದ ಕೆಳಗೆ ಜಲವನ್ನು ವಿಶಾಲದ ಮೇಲೆ ಜಲವನ್ನು ಬೇರೆ ಮಾಡಿದಾಗ ಆ ಪ್ರಕಾರವೇ ಆಯಿತು. 8) ದೇವರು ಆ ವಿಶಾಲಕ್ಕೆ ಆಕಾಶವೆಂದು ಹೆಸರಿಟ್ಟನು. ಅಸ್ತಮಯ ಉದಯ ಆದಾಗ ಎರಡನೇ ದಿನವಾಯಿತು.**

9) ದೇವರು ಆಕಾಶದ ಕೆಳಗಿರುವ ಜಲಗಳನ್ನು ಒಂದು ಕಡೆ ಹೊಂದಿಸಿ ಒಣಗಿದ ನೆಲ ಕಾಣಿಸಲಿ ಎಂದು ಎಂದಾಗ ಆ ಪ್ರಕಾರವಾಯಿತು. 10) ದೇವರು ಒಣಗಿದ ನೆಲಕ್ಕೆ ಭೂಮಿ ಎಂದು ಹೆಸರಿಟ್ಟನು, ಜಲರಾಶಿಗೆ ಆತನು ಸಮುದ್ರಗಳೆಂದು ಹೆಸರಿಟ್ಟನು. ಅದು ಒಳ್ಳೇದೆಂದು ದೇವರು ನೋಡಿದನು. 11) ದೇವರು ಹುಲ್ಲನ್ನೂ ಬೀಜಗಳನ್ನು ಕೊಡುವ ಗಿಡಗಳನ್ನೂ ಭೂಮಿ ಮೇಲೆ ತಮ್ಮ ತಮ್ಮ ಜಾತಿ ಪ್ರಕಾರ ತಮ್ಮಲ್ಲಿ ಬೀಜಗಳಿರುವ ಫಲವನ್ನು ಕೊಡುವ ಫಲವೃಕ್ಷಗಳನ್ನು ಭೂಮಿ ಹುಟ್ಟಿಸಲಿ ಎಂದು ಹೇಳಿದಾಗ ಆ ಪ್ರಕಾರವೆ ಆಯಿತು. 12) ಭೂಮಿಯು ಹುಲ್ಲನ್ನೂ ತಮ್ಮ ತಮ್ಮ ಜಾತಿ ಪ್ರಕಾರ ಬೀಜಗಳನ್ನು ಕೊಡುವ ಗಿಡಗಳನ್ನು, ತಮ್ಮ ತಮ್ಮ ಜಾತಿ ಪ್ರಕಾರ ತಮ್ಮಲ್ಲಿ ಬೀಜಗಳಿರುವ ಫಲ ವೃಕ್ಷಗಳನ್ನು ಹುಟ್ಟಿಸಿದಾಗ ಅದನ್ನು ಒಳ್ಳೇದೆಂದು ದೇವರು ನೋಡಿದನು. 13) ಅಸ್ತಮಯವೂ ಉದಯವೂ ಆದಾಗ ಮೂರನೆಯ ದಿನವಾಯಿತು.

14) ದೇವರು ಹಗಲನ್ನು ರಾತ್ರಿಯನ್ನು ಬೇರೆ ಮಾಡಿದಹಾಗೆ ಆಕಾಶವಿಶಾಲದಲ್ಲಿ ಜ್ಯೋತಿಗಳು ಉಂಟಾಗಲಿ ಎಂದು, ಅವು ಸೂಚನೆಗಳನ್ನೂ ಕಾಲಗಳನ್ನು ದಿನ ಸಂವತ್ಸರಗಳನ್ನೂ ಸೂಚಿಸುವುದಕ್ಕಾಗಿ ಇರು ಎಂದೂ, 15) ಭೂಮಿ ಮೇಲೆ ಬೆಳಕು ಕೊಡುವುದಕ್ಕೆ ಅವು ಆಕಾಶವಿಶಾಲದಲ್ಲಿ ಜ್ಯೋತಿಗಳಾಗಿರು ಎಂದನು, ಆ ಪ್ರಕಾರವೇ ಆಯಿತು. 16) ದೇವರು ಆ ಎರಡು ದೊಡ್ಡ ಜ್ಯೋತಿಗಳನ್ನ ಅಂದರೆ ಹಗಲನ್ನು ಆಳುವುದಕ್ಕೆ ದೊಡ್ಡ ಜ್ಯೋತಿಯನ್ನು, ರಾತ್ರಿಯನ್ನು ಆಳುವುದಕ್ಕೆ ಚಿಕ್ಕ ಜ್ಯೋತಿಯನ್ನು ನಕ್ಷತ್ರಗಳನ್ನು ಮಾಡಿದನು. 17), 18) ಭೂಮಿ ಮೇಲೆ ಬೆಳಕನ್ನು ಕೊಡುವುದಕ್ಕೂ, ಹಗಲನ್ನೂ ರಾತ್ರಿಯನ್ನು ಆಳುವುದಕ್ಕೂ, ಬೆಳಕನ್ನೂ ಕತ್ತಲನ್ನೂ ಬೇರೆ ಮಾಡುವುದಕ್ಕೂ, ದೇವರು ಆಕಾಶ ವಿಶಾಲದಲ್ಲಿ ಅವುಗಳನ್ನು ನೇಮಿಸಿದನು. ಅದು ಒಳ್ಳೇದೆಂದು ದೇವರು ನೋಡಿದನು. 19) ಅಸ್ತಮಯವೂ ಪ್ರಾತಃಕಾಲವೂ ಆದಾಗ ನಾಲ್ಕನೇ ದಿನವಾಯಿತು.

20) ದೇವರು ಜೀವವಿದ್ದು ಚಲಿಸುವವುಗಳನ್ನು ಜಲಗಳು ಸಂವೃದ್ಧಿಯಾಗಿ ಹುಟ್ಟಿಸಲಿ ಎಂದೂ, ಪಕ್ಷಿಗಳು ಭೂಮಿ ಮೇಲೆ ಆಕಾಶ ವಿಶಾಲದಲ್ಲಿ ಹಾರಾಡಲಿ

ಎಂದೂ ಹೇಳಿದನು. 21) ದೇವರು ಜಲಗಳಲ್ಲಿ ಅವು ಅವುಗಳ ಜಾತಿಗಳ ಪ್ರಕಾರ ಜಲಗಳು ಸಂವೃದ್ಧಿಯಾಗಿ ಹುಟ್ಟಿಸಿದ ಮಹಾ ಮತ್ಸ್ಯಗಳನ್ನೂ, ಜೀವವಿದ್ದು ಚಲಿಸುವವುಗಳೆಲ್ಲವನ್ನೂ, ಅವು ಅವುಗಳ ಜಾತಿ ಪ್ರಕಾರ ರೆಕ್ಕೆಗಳಿರುವ ಪ್ರತಿ ಪಕ್ಷಿಯನ್ನು ಸೃಜಿಸಿದನು. ಅದು ಒಳ್ಳೆಯದೆಂದು ದೇವರು ನೋಡಿದನು. 22) ದೇವರು ನೀವು ಫಲಿಸಿ ಅಭಿವೃದ್ಧಿ ಹೊಂದಿ ಸಮುದ್ರಜಲಗಳಲ್ಲಿ ತುಂಬಿಕೊಳ್ಳಲೆಂದೂ, ಪಕ್ಷಿಗಳು ಭೂಮಿ ಮೇಲೆ ವಿಸ್ತರಿಸಲೆಂದೂ, ಅವುಗಳನ್ನು ಆಶೀರ್ವದಿಸಿದನು. 23) ಅಸ್ತಮಯವೂ ಪ್ರಾತಃಕಾಲವೂ ಆದಾಗ ಐದನೇ ದಿನವಾಯಿತು.

24) ದೇವರು ತಮ್ಮ ತಮ್ಮ ಜಾತಿಗಳ ಪ್ರಕಾರ ಜೀವವಿರುವವುಗಳನ್ನೂ, ಅಂದರೆ ತಮ್ಮ ತಮ್ಮ ಜಾತಿ ಪ್ರಕಾರ ಪಶುಗಳನ್ನೂ, ಕ್ರಿಮಿಗಳನ್ನೂ, ಕಾಡು ಮೃಗಗಳನ್ನೂ ಭೂಮಿ ಹುಟ್ಟಿಸಲೆಂದು ಹೇಳಿದನು, ಆ ಪ್ರಕಾರವೇ ಆಯಿತು. 25) ದೇವರು ಆಯಾ ಜಾತಿಗಳ ಪ್ರಕಾರ ಕಾಡು ಮೃಗಗಳನ್ನೂ, ಆಯಾ ಜಾತಿಗಳ ಪ್ರಕಾರ ಪಶುಗಳನ್ನೂ, ಆಯಾ ಜಾತಿಗಳ ಪ್ರಕಾರ ನೆಲದ ಮೇಲೆ ಹರಿದಾಡುವ ಪ್ರತಿ ಕ್ರಿಮಿ(ಹುಳ)ಗಳನ್ನು ಮಾಡಿದನು. ಅದು ಒಳ್ಳೆಯದೆಂದು ದೇವರು ನೋಡಿದನು. 26) ದೇವರು ತನ್ನ ಸ್ವರೂಪದಲ್ಲಿ ತನ್ನ ಹೋಲಿಕೆಗೆ ಸರಿಯಾಗಿ ಮನುಷ್ಯರನ್ನು ಮಾಡೋಣ, ಅವರು ಸಮುದ್ರದಲ್ಲಿರುವ ಮೀನುಗಳನ್ನೂ, ಆಕಾಶ ಪಕ್ಷಿಗಳನ್ನೂ, ಪಶುಗಳನ್ನೂ ಸಮಸ್ತ ಭೂಮಿಯನ್ನೂ ಭೂಮಿ ಮೇಲೆ ಹರಿದಾಡುವ ಪ್ರತಿ ಜಂತುವನ್ನೂ ಆಳುವರು ಎಂದನು. 27) ದೇವರು ತನ್ನ ಸ್ವರೂಪದಲ್ಲಿ ಮನುಷ್ಯನನ್ನು ಸೃಜಿಸಿದನು. ದೇವರ ಸ್ವರೂಪದಲ್ಲಿ ಅವನನ್ನು ಸೃಜಿಸಿದನು. ಸ್ತ್ರೀಯಾಗಿಯೂ, ಪುರುಷನಾಗಿಯೂ ಅವರನ್ನು ಸೃಜಿಸಿದನು. ದೇವರು ಅವರನ್ನು ಆಶೀರ್ವದಿಸಿದನು. ಹೇಗೆಂದರೆ ನೀವು ಫಲಿಸಿ ಅಭಿವೃದ್ಧಿ ಹೊಂದಿ ವಿಸ್ತರಿಸಿ ಭೂಮಿಯನ್ನು ತುಂಬಿಸಿ ಅದನ್ನು ವಶಮಾಡಿಕೊಳ್ಳಿರಿ, ಸಮುದ್ರ ಮೀನುಗಳನ್ನು ಆಕಾಶ ಪಕ್ಷಿಗಳನ್ನು ಭೂಮಿ ಮೇಲೆ ಹರಿದಾಡುವ ಪ್ರತಿಜೀವಿಯನ್ನು ಆಳುವನೆಂದು ಅವರೊಂದಿಗೆ ಹೇಳಿದನು. 29) ದೇವರು ಇಗೋ ಭೂಮಿ ಮೇಲೆ ಇರುವ ಬೀಜಗಳನ್ನು ಕೊಡುವ ಪ್ರತಿ

ಗಿಡವನ್ನು, ಬೀಜಗಳನ್ನು ಕೊಡುವ ವೃಕ್ಷಫಲಗಳಿರುವ ಪ್ರತಿ ವೃಕ್ಷವನ್ನು ನಿಮಗೆ ಕೊಟ್ಟಿದ್ದೇನೆ. ಅವು ನಿಮಗೆ ಆಹಾರವಾಗುತ್ತವೆ. 30) ಭೂಮಿ ಮೇಲಿರುವ ಜಂತುಗಳೆಲ್ಲವುಗಳಿಗು, ಆಕಾಶ ಪಕ್ಷಿಗಳೆಲ್ಲವುಗಳಿಗು, ಭೂಮಿ ಮೇಲೆ ಹರಿದಾಡುವ ಸಮಸ್ತ ಜೀವಿಗಳಿಗು ಹಸಿರಿನ ಗಿಡಗಳೆಲ್ಲವೂ ಆಹಾರವಾಗುವವೆಂದನು, ಆ ಪ್ರಕಾರವಾಯಿತು. 31) ದೇವರು ತಾನು ಉಂಟುಮಾಡಿದವುಗಳೆಲ್ಲವನ್ನೂ ನೋಡಿದಾಗ ಅದು ಬಹಳ ಸುಂದರವಾಗಿತ್ತು. ಅಸ್ತಮಯವೂ ಪ್ರಾತಃಕಾಲವೂ ಆದಾಗ ಆರನೇ ದಿನವಾಯಿತು.

ಎರಡನೆಯ ಅಧ್ಯಾಯ:– ಒಂದನೆ ವಾಕ್ಯದಿಂದ 1) ಆಕಾಶ ಭೂಮಿ ಅವುಗಳಲ್ಲಿರುವ ಸಮಸ್ತ ಸಮೂಹವನ್ನೂ ಸಂಪೂರ್ತಿ ಮಾಡಲಾಯಿತು. 2) ದೇವರು ತಾನು ಮಾಡಿದ ತನ್ನ ಕೆಲಸ ಏಳನೆಯದಿನದೊಳಗೆ ಸಂಪೂರ್ಣ ಮಾಡಿ, ತಾನು ಮಾಡಿದ ತನ್ನ ಕೆಲಸವೆಲ್ಲದರಿಂದ ಏಳನೆಯ ದಿನದಲ್ಲಿ ವಿಶ್ರಮಿಸಿಕೊಂಡನು. 3) ಆದ್ದರಿಂದ ದೇವರು ಆ ಏಳನೆಯ ದಿನವನ್ನು ಆಶೀರ್ವದಿಸಿ ಪರಿಶುದ್ಧಪಡಿಸಿದನು. ಏಕೆಂದರೆ ಅದರಲ್ಲಿ ದೇವರು ತಾನು ಮಾಡಿದಹಾಗೆ, ತಾನು ಸೃಜಿಸಿದ ಹಾಗೆ ತನ್ನ ಕೆಲಸ ಎಲ್ಲದರಿಂದ ವಿಶ್ರಮಿಸಿದನು. 4) ದೇವರಾದ ಯೆಹೋವಾ ಭೂಮಿಯನ್ನು ಆಕಾಶವನ್ನು ಮಾಡಿದ ದಿನದಂದು ಭೂಮ್ಯಾಕಾಶಗಳು ಸೃಜಿಸಲ್ಪಟ್ಟಾಗ ಅವುಅವುಗಳ ಉತ್ಪತ್ತಿ ಕ್ರಮ ಇದೇ. 5) ಆದಿವರೆಗು ಹೊಲದಲ್ಲಿನ ಯಾವ ಪೊದೆಯೂ ಭೂಮಿಮೇಲೆ ಇರಲಿಲ್ಲ. ಹೊಲದಲ್ಲಿನ ಯಾವ ಗಿಡವೂ ಹುಟ್ಟಿರಲಿಲ್ಲ. ಏಕೆಂದರೆ ದೇವರಾದ ಯೆಹೋವಾ ಭೂಮಿ ಮೇಲೆ ಮಳೆಯನ್ನು ಸುರಿಸಿರಲಿಲ್ಲ. ಭೂಮಿಯನ್ನು ಉಳುಮೆ ಮಾಡುವುದಕ್ಕೆ ಮನುಷ್ಯನು ಇಲ್ಲ. 6) ಆದರೆ ಆವಿ ಭೂಮಿಯಿಂದ ಎದ್ದು ನೆಲವನ್ನೆಲ್ಲಾ ತೋಯಿಸಿತು. 7) ದೇವರಾದ ಯೆಹೋವ ನೆಲದಮಣ್ಣಿನಿಂದ ನರನನ್ನು ನಿರ್ಮಿಸಿ ಅವನ ನಾಸಿಕಾರಂಧ್ರಗಳಲ್ಲಿ ಜೀವ ವಾಯುವನ್ನು ಊದಿದಾಗ ನರನು ಜೀವಾತ್ಮ ಆದನು.

ಈಗ ಮೇಲೆ ಬರೆದಿರುವುದೆಲ್ಲವೂ ಬೈಬಲ್ ಆದಿಕಾಂಡದಲ್ಲಿನ ಮೊದಲನೇ ವಿಷಯವೆಂದಿದ್ದೇವಲ್ಲ! ಇಲ್ಲಿರುವುದೆಲ್ಲವೂ ಹೇತುವಾದಕ್ಕಾಗಲಿ,

ಸತ್‌ವಿಮರ್ಶೆಗಾಗಲಿ ನಿಲ್ಲದ ವಿಷಯವೆಂದು ತಿಳಿಯುತ್ತದೆ. ಅವುಗಳಲ್ಲಿ ಕೆಲವನ್ನು ನಾವು ಕೇಳುತ್ತಿದ್ದೇವೆ. ಮೊದಲನೆಯ ಅಧ್ಯಾಯದಲ್ಲಿ ಒಂದು ಎರಡು ವಾಕ್ಯಗಳನ್ನು ನೋಡಿದ ನಂತರ ಮೊದಲು ಸೃಷ್ಟಿಯೇ ಇಲ್ಲದಿರುವಾಗ, ಮಾನವನೇ ಇಲ್ಲದಿರುವಾಗ ಅಲ್ಲಿರುವ ಪರಿಸ್ಥಿತಿಯನ್ನು ಯಾರು ನೋಡಿ ಬರೆದಿದ್ದಾರೆ? ಎಂದು ಪ್ರಶ್ನೆ ಬರುತ್ತದೆ. 2ನೇ ವಾಕ್ಯದಲ್ಲಿ "ಭೂಮಿ ನಿರಾಕಾರವಾಗಿಯೂ, ಶೂನ್ಯವಾಗಿಯೂ ಇತ್ತು" ಎಂದಾಗ, ಮೂರನೇ ದಿನದಲ್ಲಿ ದೇವರು ಭೂಮಿಯನ್ನು ತಯಾರು ಮಾಡಿದ್ದಾನೆ ಎಂದು ಇದೆ. ಅಲ್ಲಿಯವರೆಗು ಭೂಮಿ ಇಲ್ಲವೆಂದೇ ತಾನೆ ಅರ್ಥ. ಅಂತಹದರಲ್ಲಿ ಮೊದಲನೆಯ ದಿನವೇ ಭೂಮಿ ನಿರಾಕಾರವಾಗಿ ಶೂನ್ಯವಾಗಿ ಇತ್ತೆಂದು ಭೂಮಿಯನ್ನು ಕುರಿತು ಪ್ರಸ್ತಾಪಿಸಿದ್ದಾರಲ್ಲ! ಇದರಲ್ಲಿ ಯಾವ ಮಾತು ನಿಜ. ಮೊದಲನೆಯ ದಿನವಿದ್ದ ಎರಡನೆ (2) ವಾಕ್ಯದಲ್ಲಿನ ಭೂಮಿ ಸತ್ಯವಾ? ಅಥವಾ ಮೂರನೆಯದಿನವಿದ್ದ ಒಂಬತ್ತನೆಯ (9) ವಾಕ್ಯದಲ್ಲಿನ ಭೂಮಿ ಸತ್ಯವಾ? ಯಾವುದು ಸತ್ಯವೆಂದು ಅನುಮಾನ ಬಾರದೇ ಇರುವುದಿಲ್ಲ. ಇಲ್ಲಿ ಎರಡನೆಯ ವಾಕ್ಯ ಸತ್ಯವಾದರೆ, ಅಲ್ಲಿ ಒಂಬತ್ತನೇವಾಕ್ಯ ಅಸತ್ಯವಾಗಬೇಕು. ಹಾಗಲ್ಲದೇ ಒಂಬತ್ತನೇ ವಾಕ್ಯ ಸತ್ಯವಾದರೆ, ಎರಡನೆಯ ವಾಕ್ಯ ಅಸತ್ಯವಾಗಬೇಕು.

ಎರಡನೇ ವಾಕ್ಯದಲ್ಲೇ ಶೂನ್ಯವಾಗಿ ಇದ್ದಿತೆಂಬ ಮಾತೂ ಸಹ ಇದೆ. ಶೂನ್ಯ ಎಂದರೆ ಆಕಾಶವೆಂದೇ ತಾನೆ ಅರ್ಥ. ಗಗನಮ್ ಶೂನ್ಯಮ್ ಎನ್ನುವ ಮಾತಿನ ಪ್ರಕಾರ ಶೂನ್ಯವೆಂದರೂ ಆಕಾಶವೆಂದರೂ ಎರಡೂ ಒಂದೇ. ಮೊದಲನೆಯ ದಿನದಲ್ಲಿ ಬೆಳಕನ್ನೂ ಸಹ ಸೃಷ್ಟಿಸುವುದಕ್ಕೆ ಮೊದಲೇ ಶೂನ್ಯವಿರುವಾಗ ಎರಡನೆಯದಿನ ದೇವರು ಆಕಾಶವನ್ನು ತಯಾರು ಮಾಡಿದ್ದಾನೆಂದು ಹೇಳುವುದೇನು? ಎಂದು ಪ್ರಶ್ನೆ ಬಾರದೇ ತಪ್ಪುವುದಿಲ್ಲ. ಮೊದಲನೆಯ ದಿನ ಹೇಳಿದ ಶೂನ್ಯ ಆಕಾಶವಲ್ಲವೆ? ಎರಡನೆಯ ದಿನ ಮಾಡಿದ ಆಕಾಶಕ್ಕೆ ಮೊದಲನೆಯ ದಿನವೇ ಇದೆಯೆಂದು ಹೇಳಿದ ಆಕಾಶಕ್ಕೂ ಏನಾದರೂ ವ್ಯತ್ಯಾಸವಿದೆಯಾ? ಇದರ ಪ್ರಕಾರ ಮೊದಲನೆಯ ದಿನ ಹೇಳಿದ

ಆಕಾಶ ಸತ್ಯವಾ? ಎರಡನೆಯ ದಿನ ಹೇಳಿದ ಆಕಾಶ ಸತ್ಯವಾ? ಇದೂ ಸಹ ಪ್ರಶ್ನೆಯನ್ನುಂಟುಮಾಡುವ ವಿಷಯವೇ ಅಲ್ಲವೆ!

ಇನ್ನು ಐದನೇ (5) ವಾಕ್ಯವನ್ನು ನೋಡುವುದಾದರೆ "ದೇವರು ಬೆಳಕಿಗೆ ಹಗಲೆಂದು, ಕತ್ತಲಿಗೆ ರಾತ್ರಿ ಎಂದು ಹೆಸರು ಇಟ್ಟಿದ್ದಾನೆ. ಅಸ್ತಮಯ ಮುಂಜಾನೆ ಉಂಟಾದಾಗ ಒಂದು ದಿನವಾಯಿತು" ಎಂದು ಇದೆ. ಇಲ್ಲಿ ಮುಂಜಾನೆಯನ್ನು ಅಸ್ತಮಯವನ್ನು ತೆಗೆದುಕೊಂಡು ನೋಡೋಣ. ಉದಯಿಸುವುದು ಎಂದರೆ ಹುಟ್ಟುವುದು ಎಂಬ ಅರ್ಥ ಎಲ್ಲರಿಗೂ ತಿಳಿದಿದೆ. ಹಾಗೆ ಅಸ್ತಮಿಸುವುದು ಎಂದರೆ ಇಲ್ಲದೇ ಹೋಗುವುದು ಎಂದು ಸಹ ಎಲ್ಲರಿಗೂ ತಿಳಿದಿದೆ. ಇದರ ಪ್ರಕಾರ ಹುಟ್ಟಿಬಂದ ಕಾಲವನ್ನು ಉದಯ ಎಂದು, ಹುಟ್ಟಿಬಂದವನು ಇಲ್ಲದೇ ಹೋದ ಕಾಲವನ್ನು ಅಸ್ತಮಯವೆಂದು ಎನ್ನುತ್ತೇವೆ. ಪ್ರತಿ ದಿನ ಸೂರ್ಯನ ಹುಟ್ಟುವಿಕೆ ಕಾಲವನ್ನು ಸೂರ್ಯೋದಯವೆಂದೂ ಹಾಗೇ ಸೂರ್ಯನು ಕಾಣಿಸದೇ ಹೋಗುವ ಕಾಲವನ್ನು ಸೂರ್ಯಾಸ್ತಮಯ ವೆಂದು ಹೇಳುತ್ತಿದ್ದೇವೆ. ಆದರೆ ಐದನೇ (5) ವಾಕ್ಯದ ಪ್ರಕಾರ ಯಾರು ಹುಟ್ಟಿದರೆ ಉದಯವಾಗಿದೆ. ಯಾರು ಹೋಗಿದ್ದರೆ ಅಸ್ತಮಯವಾಗಿದೆ ಎಂದು ಪ್ರಶ್ನೆ ಬಾರದೇ ಇರುವುದಿಲ್ಲ. ಅಸ್ತಮಯ ಉದಯ ಆದಾಗ ಒಂದು ದಿನವಾಯಿತು ಎಂದೂ ಹಾಗೇ ಎರಡನೇ ದಿನವಾಯಿತು, ಮೂರನೇ ದಿನವಾಯಿತು ಎಂದು ಬರೆಯಲಾಗಿದೆ. ಸೃಷ್ಟಿಕ್ರಮದಲ್ಲಿ ದೇವರು ನಾಲ್ಕನೇ ದಿನದಲ್ಲಿ ಎರಡು ಜ್ಯೋತಿಗಳಾದ ಸೂರ್ಯಚಂದ್ರರನ್ನು ಸೃಷ್ಟಿಸಿದಹಾಗೆ, ಮತ್ತು ದಿನವನ್ನು ಸಂವತ್ಸರಗಳನ್ನು ಸೂಚಿಸುವುದಕ್ಕೇ ಎರಡು ಜ್ಯೋತಿಗಳನ್ನು ತಯಾರು ಮಾಡಿದಹಾಗೆ ಹದಿನಾಲ್ಕನೆ (14) ವಾಕ್ಯದಲ್ಲಿ ಇದೆ. ನಾಲ್ಕನೇ ದಿನದಲ್ಲಿ ಸೂರ್ಯಚಂದ್ರರು ತಯಾರು ಮಾಡಲಾಗಿ ದಿನಗಳ ಸಂವತ್ಸರಗಳ ಕ್ರಮ ಬಂದಿದ್ದರೇ ಮೊದಲನೆಯ ದಿನ ಯಾರ ಅಸ್ತಮಯ ಯಾರ ಉದಯದ ಪ್ರಕಾರ ದಿನವಾಗಿದೆಯೆಂದು ಹೇಳಲಾಗಿದೆಯೆಂಬ ಪ್ರಶ್ನೆ ಯಾರಿಗಾದರೂ ಬರಬಹುದು. ಒಂದು ದಿನವೆಂದು, ಅಸ್ತಮಯವೆಂದು, ಉದಯವೆಂದು ಐದನೇ

ವಾಕ್ಯದಲ್ಲಿ ಇರುವಾಗ ಯಾರ ಪ್ರಮಾಣದಿಂದ ದಿನವಾಗಿದೆ? ಯಾರ ಪ್ರಮಾಣದಿಂದ ಅಸ್ತಮಯವಾಗಿದೆ? ಯಾರ ಪ್ರಮಾಣದಿಂದ ಉದಯವಾಗಿದೆ ಯಾರಾದರೂ ಹೇಳಬಲ್ಲಿರಾ?

ಸೃಷ್ಠಿಕ್ರಮದಲ್ಲಿ ಐದನೇ ದಿನದಲ್ಲಿ ಜೀವ ಹೊಂದಿ ನೀರಲ್ಲಿ ಚಲಿಸುವ ಮೀನುಗಳನ್ನು, ಭೂಮಿ ಮೇಲೆ ಆಕಾಶದಲ್ಲಿ ಎಗುರುವ ಪಕ್ಷಿಗಳನ್ನು ದೇವರು ತಯಾರು ಮಾಡಿದ್ದಾನೆಂದು 20,21,22 ವಾಕ್ಯಗಳಲ್ಲಿ ಇದೆ. ನಂತರ ಆರನೇ ದಿನದಲ್ಲಿ ಮೊದಲು ಜೀವವಿರುವ ಹುಳಗಳನ್ನು ಜಂತುಗಳನ್ನು ಮೃಗಗಳನ್ನು ತಯಾರು ಮಾಡಿದ ನಂತರ ಮನುಷ್ಯನನ್ನು ತಯಾರು ಮಾಡಿದ್ದಾನೆಂದು ಇದೆ. ಮನುಷ್ಯನನ್ನು ಮಣ್ಣಿನಿಂದ ತಯಾರಿಸಿ ನಾಸಿಕಾ ರಂಧ್ರದಲ್ಲಿ ಜೀವವಾಯುವನ್ನು ಊದಿದಾಗ ನರನು ಜೀವಾತ್ಮ ಆದನು ಎಂದು 2ನೇ ಅಧ್ಯಾಯ 7ನೇ ವಾಕ್ಯದಲ್ಲಿ ಇದೆ. ಈಗ ನಾವು ಕೇಳುವುದೇನೆಂದರೆ! ಆರನೇ ದಿನ ಮನುಷ್ಯನನ್ನು ತಯಾರು ಮಾಡಿದ ನಂತರ ಜೀವಾತ್ಮ ತಯಾರಾಗಿದೆ ಎಂದು ಹೇಳಿದಾಗ, ಮೂರನೇ ದಿನದಲ್ಲಿ ಜೀವ ಹೊಂದಿ ನೀರಲ್ಲಿ ಚಲಿಸುವ ಮೀನುಗಳನ್ನು ಗಾಳಿಯಲ್ಲಿ ಎಗುರುವ ಪಕ್ಷಿಗಳನ್ನು ಸೃಷ್ಠಿಸಿದಹಾಗೆ ಇದೆಯಲ್ಲವೆ! ಆರನೇ ದಿನವೂ ಸಹ ಮನುಷ್ಯನನ್ನು ತಯಾರು ಮಾಡದ ಮೊದಲೇ ಜೀವವಿರುವ ಜಂತುಗಳನ್ನು, ಮೃಗಗಳನ್ನು ನೆಲದ ಮೇಲೆ ಓಡಾಡುವ ಹುಳಗಳನ್ನು ದೇವರು ತಯಾರು ಮಾಡಿದ್ದಾನೆಂದು ಹೇಳಿದ್ದೀರಲ್ಲ! ಅದರ ಪ್ರಕಾರ ಮೂರನೇ ದಿನದಿಂದಲೇ ಭೂಮಿ ಮೇಲೆ ಜೀವ (ಜೀವಾತ್ಮ) ಇರುವಹಾಗೆ ಅಲ್ಲವೆ! ಅಂತಹದರಲ್ಲಿ ಆರನೇ ದಿನ ಮನುಷ್ಯನನ್ನು ಮಾಡಿದಾಗ ಜೀವಾತ್ಮ ಆದನು ಎನ್ನುವುದೇನು? ಅದಕ್ಕೂ ಮೊದಲು ಮೂರನೇ ದಿನದಿಂದ ತಯಾರಾದ ಜೀವವಿರುವ ಪ್ರಾಣಿಗಳೆಲ್ಲವೂ ಜೀವಾತ್ಮಗಳಲ್ಲವೇ? ಯಾರೋ ಪಕ್ಕದಲ್ಲಿದ್ದು ದೇವರ ಸೃಷ್ಠಿಕ್ರಮವೆಲ್ಲವನ್ನೂ ನೋಡಿ ಬರೆದ ಆತನಿಗೆ ಮೊದಲು ಹುಟ್ಟಿದ ಜಂತುಗಳು ಪಕ್ಷಿಗಳು ಮೀನುಗಳು ಜೀವಾತ್ಮಗಳಾಗಿ ಕಾಣಿಸಲಿಲ್ಲವೇ? ಕಾಣಿಸದೇ ಹೋದರೆ ಜೀವವಿರುವವುಗಳನ್ನು ದೇವರು ತಯಾರು ಮಾಡಿದ್ದಾನೆಂದು

ಹೇಗೆ ಬರೆದಿದ್ದಾನೆ? ಪ್ರತಿ ವಿಷಯ ನಮಗೆ ವಿವರವಾಗಿ ಬೇಕೆನ್ನುವವರಿಗೆ ಆದಿಕಾಂಡದಲ್ಲಿನ ಮೊದಲನೇ ಅಧ್ಯಾಯ ಸಂಶಯವಿಲ್ಲದ ಜ್ಞಾನವನ್ನು ತಿಳಿಸುತ್ತದಾ? ಅಥವಾ ಎಲ್ಲಾ ಸಂಶಯಗಳಿಂದ ಕೂಡಿಕೊಂಡ ಸಮಾಚಾರವನ್ನು ತಿಳಿಸುತ್ತದಾ? ಈ ವಿಧವಾಗಿ ಕೇಳುತ್ತಾ ಹೋದರೆ ಎಲ್ಲಾ ಪ್ರಶ್ನೆಗಳೇ ಉಳಿಯುತ್ತವೆ. ಒಂದಕ್ಕೂ ಸಹ ಸರಿಯಾದ ಉತ್ತರ ಸಿಗುವುದಿಲ್ಲ. ಇಂತಹ ಅನುಮಾನಗಳಿಂದ ಕೂಡಿಕೊಂಡ ಸಮಾಚಾರವಿರುವುದು ಯಾವುದಾದರೂ ಪವಿತ್ರವೆನಿಸಿ ಕೊಳ್ಳುವುದಿಲ್ಲ. ಆದ್ದರಿಂದ ಬೈಬಲ್‌ಗೆ ಪವಿತ್ರತೆ, ಪರಿಶುದ್ಧತೆ ಹೊಸ ನಿಬಂಧನೆಯಲ್ಲಿ ನಾಲ್ಕು ಸುವಾರ್ತೆಗಳಿಂದಲೇ ಬಂದಿವೆಯೆಂದುಕೊಳ್ಳಬಹುದು. ಯೇಸು ಪ್ರಭುವಿನ ಜೀವನ ಪಾಠಗಳಿರುವ ಮತ್ತಾಯ, ಮಾರ್ಕ, ಲೂಕಾ, ಯೋಹಾನು ಸುವಾರ್ತೆಗಳೇ ಬೈಬಲ್‌ಗೆ ಪರಿಶುದ್ಧ ಗ್ರಂಥವೆಂದು ಹೆಸರು ತಂದಿವೆ. ಆ ನಾಲ್ಕು ಸುವಾರ್ತೆಗಳಲ್ಲಿನ ಪ್ರಭು ಜ್ಞಾನದಿಂದಲೇ ಬೈಬಲ್ ಗ್ರಂಥಕ್ಕೆ ಶಕ್ತಿಯೂ ಸಹ ಏರ್ಪಟ್ಟಿದೆ. ಯೇಸು ಪ್ರಭು ಚರಿತ್ರೆ ಇರುವುದರಿಂದಲೇ ದೆವ್ವಗಳು ಸಹಿತ ಬೈಬಲ್‌ನ್ನು ನೋಡಿದರೆ ಭಯಪಡುತ್ತಿವೆ. ಇದೆಲ್ಲವೂ ನೋಡಿದರೆ ಆದಿಕಾಂಡದಲ್ಲಿನ ಆದಿ ಅಧ್ಯಾಯ ಶಾಸ್ತ್ರಬದ್ಧತೆ ಇಲ್ಲದ ಅಸತ್ಯಗಳ ಹುತ್ತ ಎಂದು ತಿಳಿಯುತ್ತದೆ. ಶಾಸ್ತ್ರಬದ್ಧತೆ ಇಲ್ಲದ ಅಧ್ಯಾಯದಲ್ಲಿ ಸೃಷ್ಟಿ ವಿಧಾನವಿದೆ. ಆದ್ದರಿಂದ ದೇವರು ಈ ವಿಧವಾಗಿ ಸೃಷ್ಟಿಸಿಲ್ಲವೇನೋ ಎಂದು, ಹೇಳಿರುವುದೆಲ್ಲಾ ಸುಳ್ಳೆಂಬ ಅನುಮಾನ ಬರುತ್ತದೆ.

ದೇವರು ಮಾನವರಿಗೆ ಏನು ಹೇಳಿದರೂ ಸತ್ಯವಚನಗಳನ್ನೇ ಹೇಳುವನು. ಅಸತ್ಯವಚನಗಳನ್ನಾಗಲಿ, ಅನುಮಾನಬರುವ ಮಾತುಗಳನ್ನಾಗಲಿ, ಸಂದಿಗ್ಧದಲ್ಲಿ ಬೀಳುವ ವಾಕ್ಯಗಳನ್ನಾಗಲೀ ಹೇಳುವುದಿಲ್ಲ. ದೇವರು ತಿಳಿಸಿದ ಜ್ಞಾನ ಮನುಷ್ಯರು ಹೇಳಿದ ಜ್ಞಾನಕ್ಕಿಂತಲೂ ಎಷ್ಟೋ ಪಟ್ಟು ದೊಡ್ಡದು. ದೇವರ ಜ್ಞಾನ ದೇವರಿಗೇ ತಿಳಿದಿರುತ್ತದೆ, ಮನುಷ್ಯರಿಗೆ ಯಾರಿಗೂ ತಿಳಿದಿಲ್ಲ. ಆದ್ದರಿಂದ ಮನುಷ್ಯರಿಗೆ ದೇವರ ಜ್ಞಾನವನ್ನು ತಿಳಿಸುವುದಕ್ಕೆ ದೇವರೇ ಮನುಷ್ಯ ರೂಪದಲ್ಲಿ ಭೂಮಿ ಮೇಲೆ ಕಾಣಿಸಿ ತನ್ನ ಬೋಧನೆಯನ್ನು ಹೇಳಿ ಹೋಗುವನು.

ಆ ವಿಧವಾಗಿ ಬಂದಿರುವ ಮನುಷ್ಯ ತಾನು ದೇವರೆಂದು ಯಾರೂ ಗುರುತಿಸದ ಹಾಗೆ ಇದ್ದು ಜ್ಞಾನವನ್ನು ಹೇಳಿಹೋಗುವನು. ದೇವರು ಮನುಷ್ಯನಾಗಿ ಬಂದಿರುವ ಸಂದರ್ಭಗಳು ಎರಡು ಮಾತ್ರ ನಮಗೆ ತಿಳಿದಿರುವವು ಇವೆ. ಆ ಎರಡು ಬಾರಿ ದೇವರು ಮನುಷ್ಯರೂಪದಲ್ಲಿದ್ದು ಹೇಳಿರುವ ಬೋಧನೆಗಳು ಬಹಳ ದೊಡ್ಡವು. ಆದರೆ ಆ ದೊಡ್ಡತನವೇನೋ ಬಹಳ ಜನ ಮನುಷ್ಯರಿಗೆ ಅರ್ಥವಾಗದೇ ಹೋಗಿದೆ. ಅದಕ್ಕೆ ಕಾರಣ ದೇವರಿಂದ ತಯಾರು ಮಾಡಲಾಗಿರುವ ಮಾಯೆವೊಂದರ ಕೆಲಸವೇ ಎಂದು ತಿಳಿಯುತ್ತಿದೆ. ಮಾಯೆಗೆ ಮತ್ತೆ ಕೆಲವು ಹೆಸರುಗಳಿವೆ. ಸಾತಾನ್ ಎಂದರೂ, ಸೈತಾನ್ ಎಂದರೂ ಎರಡೂ ಮಾಯೆವೊಂದರ ಹೆಸರುಗಳೇ. ದೇವರು ಭೂಮಿಮೇಲೆ ತನ್ನ ಸ್ವಚ್ಛವಾದ ಪವಿತ್ರವಾದ ಜ್ಞಾನವನ್ನು ಹೇಳಿಹೋದರೆ ಮಾಯೆ ಅದನ್ನು ಸ್ವಚ್ಛತೆ ಇಲ್ಲದಹಾಗೆ, ಪವಿತ್ರತೆ ಇಲ್ಲದಹಾಗೆ, ಪಕ್ಕದ ಮನುಷ್ಯರ ಮಾತುಗಳನ್ನು ಸೇರಿಸಿ ದೇವರ ಜ್ಞಾನಕ್ಕೆ ಬೆಲೆ ಇಲ್ಲದೇ ಮಾಡುತ್ತಿದೆ. ಅದೇ ಪದ್ಧತಿ ಪ್ರಕಾರ ಭಗವದ್ಗೀತೆಯಲ್ಲಿ ಕೃಷ್ಣನು ಹೇಳಿದ ಬೋಧನೆಗೂ ಮನುಷ್ಯರ ಮಾತುಗಳನ್ನು ಸೇರಿಸಿ ಸ್ವಲ್ಪ ಅಶಾಸ್ತ್ರೀಯ ಮಾಡಿದೆ. ಹಾಗೇ ಪರಿಶುದ್ಧ ಬೈಬಲ್‌ನಲ್ಲಿ ನಾಲ್ಕು (4) ಭಾಗಗಳು ದೇವರು ಹೇಳಿದ ಜ್ಞಾನವಿದ್ದರೆ ಅರವತ್ತೆರಡು (62) ಭಾಗಗಳು ಮನುಷ್ಯರಿಂದ ಹೇಳಲಾಗಿರುವ ಜ್ಞಾನವಿದೆ. ಭಗವದ್ಗೀತೆಯಲ್ಲಿ ಯಾರೂ ಗುರುತಿಸದ ಹಾಗೆ ಅಲ್ಲಲ್ಲಿ 701 ಶ್ಲೋಕಗಳಲ್ಲಿ 123 ಶ್ಲೋಕಗಳು ಮನುಷ್ಯರು ಹೇಳಿರುವವು ಇವೆ. ಆದ್ದರಿಂದ ಭಗವದ್ಗೀತೆಯಾಗಲಿ, ಬೈಬಲ್ ಆಗಲಿ ಇಲ್ಲಿಯವರೆಗು ಬಹಳ ಜನರಿಗೆ ಅರ್ಥವಾಗಲಿಲ್ಲವೆಂದೇ ಹೇಳಬಹುದು. ದೇವರಿಂದ ಹೇಳಲಾಗಿರುವ ಜ್ಞಾನದಲ್ಲಿಯೂ ಸಹ ಮಾಯೆ ಪ್ರಭಾವ ಸ್ವಲ್ಪ ಜಾಗ ಮಾಡಿಕೊಂಡಿರುವುದರಿಂದ, ಮಾಯೆಯಿಂದ ಆಕರ್ಷಿತರಾದ ಜನರು ಇತ್ತ ಬೈಬಲ್‌ನಲ್ಲಾಗಲಿ ಅತ್ತ ಭಗವದ್ಗೀತೆಯಲ್ಲಾಗಲಿ ಮಾಯೆ ಮಾತುಗಳನ್ನೇ ಮುಖ್ಯ ಜ್ಞಾನವಾಗಿ ಆಯ್ಕೆ ಮಾಡಿಕೊಂಡು, ದೇವರ ಮಾತುಗಳನ್ನು ಪಕ್ಕಕ್ಕೆ ತಳ್ಳುತ್ತಿದ್ದಾರೆ. ನಾವು ಈ ವಿಷಯವನ್ನು ಗ್ರಹಿಸಿ ಮಾಯೆಯಿಂದ ಹೇಳಿಸಿರುವ

ಮನುಷ್ಯರ ಮಾತುಗಳಿಗೆ ಬೆಲೆ ಕೊಡದೇ ದೇವರು ಹೇಳಿರುವ ಮಾತುಗಳಿಗೇ ಹೆಚ್ಚಿನ ಬೆಲೆ ಕೊಡುತ್ತಿದ್ದೇವೆ. ಈ ನಮ್ಮ ವಿಧಾನದ ಪ್ರಕಾರ ಭಗವದ್ಗೀತೆಯಲ್ಲಿನ ಅಶಾಸ್ತ್ರೀಯವಾದ 123 ಶ್ಲೋಕಗಳನ್ನು ತೆಗೆದುಹಾಕಿದ್ದೇವೆ. ಹಾಗೇ ಬೈಬಲ್‌ನಲ್ಲಿನ ಯೇಸು ಪ್ರಭು ಮಾತುಗಳಿರುವ ನಾಲ್ಕು ಸುವಾರ್ತೆಗಳು ಮನುಷ್ಯನನ್ನು ಚರಿತಾರ್ತ ಮಾಡುತ್ತವೆಂದು, ಅದಕ್ಕಿಂತ ಮೀರಿದ ಜ್ಞಾನ ಉಳಿದ ಬೈಬಲ್‌ನಲ್ಲಿ ಇಲ್ಲವೆಂದು ಹೇಳುತ್ತಿದ್ದೇವೆ. ಆದ್ದರಿಂದ ನಾಲ್ಕು ಸುವಾರ್ತೆಗಳನ್ನು ಬಿಟ್ಟು ಉಳಿದವುಗಳಲ್ಲಿ ಅಲ್ಲಲ್ಲಿ ಅಶಾಸ್ತ್ರೀಯತೆ ಕಾಣಿಸುತ್ತದೆಂದು ಹೇಳುತ್ತಿದ್ದೇವೆ. ಭಗವದ್ಗೀತೆಯಲ್ಲಾಗಲಿ, ಬೈಬಲ್‌ನಲ್ಲಾಗಲಿ ಬಹಳ ಜನ ಮಾಯೆಯೊಂದಿಗೆ ಕೂಡಿಕೊಂಡ ವಾಕ್ಯಗಳನ್ನೇ ಹೇಳಿಕೊಳ್ಳುತ್ತಿದ್ದಾರೆ. ಅವರೆಲ್ಲಾ ನಿಜವಾದ ದೇವರ ಜ್ಞಾನ ತಿಳಿಯುವುದಕ್ಕೆ ಉದಾಹರಣೆಯಾಗಿ ಆದಿಕಾಂಡ ಮೊದಲನೆ ಅಧ್ಯಾಯವನ್ನು ನಮೂನೆಯಂತೆ ತೆಗೆದು ತೋರಿಸಿದ್ದೇವೆ. ಹಾಗೇ ನಾವು ಬರೆದ **ತ್ರೈತಸಿದ್ಧಾಂತ ಭಗವದ್ಗೀತೆ** ಯಲ್ಲಿಯೂ ಸಹ ಇವು ದೇವರು ಹೇಳಿದ ಶ್ಲೋಕಗಳು ಅಲ್ಲವೆಂದು ಹೇಳಿ ಅವುಗಳನ್ನು ಪೂರ್ತಿಯಾಗಿ ಗೀತೆಯಿಂದ ತೆಗೆದುಹಾಕುವುದು ನಡೆದಿದೆ.

ನಾವು ಕ್ರೈಸ್ತರೊಂದಿಗೆ ಮಾತನಾಡಿದರೆ ನಾಲ್ಕು ಸುವಾರ್ತೆಗಳಲ್ಲಿನ ಜ್ಞಾನವೇ ಮಾತನಾಡುತ್ತೇವೆ. ಹಿಂದೂಗಳೊಂದಿಗೆ ಮಾತನಾಡಿದರೆ ಭಗವದ್ಗೀತೆಯಲ್ಲಿ ನಾವು ದೇವರ ಜ್ಞಾನವಾಗಿ ಗುರುತಿಸಿರುವುದನ್ನೇ ಮಾತನಾಡುತ್ತೇವೆ. ಆದರೇ ನಾವು ಮಾತನಾಡಿದರೆ ಯಾವ ಅಸೂಯೆ ಇಲ್ಲದೇ ಕ್ರೈಸ್ತರು ಕೇಳುತ್ತಿದ್ದಾರೆ. ಕೊನೆಗೆ ನಮಗೆ ಗೌರವವನ್ನು ಕೊಡುತ್ತಿದ್ದಾರೆ. ಹಿಂದೂಗಳ ವಿಷಯಕ್ಕೆ ಬಂದರೆ ಅವರು ಮಾಯೆಕಡೆ ಹೆಚ್ಚಿನ ಆಸಕ್ತಿಯನ್ನು ತೋರಿಸುತ್ತಾ ನಾವು ಹೇಳುವ ಜ್ಞಾನವನ್ನು ಲೆಕ್ಕ ಮಾಡದೇ ಇದ್ದಾರೆ. ಭಗವದ್ಗೀತೆಗೇ ಬೆಲೆಕೊಡದ ಸ್ಥಿತಿಯಲ್ಲಿದ್ದು ನಮ್ಮನ್ನೂ ಸಹ ಅಗೌರವಪಡಿಸುತ್ತಿದ್ದಾರೆ. ಇನ್ನು ಮುಸ್ಲಿಮ್‌ರ ವಿಷಯಕ್ಕೆ ಬಂದರೆ ನಾವು ಹೇಳುವ ಮಾತುಗಳು ಚೆನ್ನಾಗಿ ಒಪ್ಪಿಕೊಂಡವರಾಗಿ ಸಂತೋಷಪಡುತ್ತಾ ನಮ್ಮನ್ನು ದೊಡ್ಡ ಭಾವದಿಂದ

ನೋಡುತ್ತಿದ್ದಾರೆ. ನಾವು ಇಲ್ಲಿಯವರೆಗು ಕ್ರೈಸ್ತಮತದಲ್ಲಿಯೂ, ಹಿಂದೂಮತ ದಲ್ಲಿಯೂ ಇರುವ ಜ್ಞಾನ ಲೋಪಗಳನ್ನು ಹೇಳುತ್ತಾ ಬಂದಿದ್ದೇವೆ. ದೇವರು ಮಾತ್ರ ಯಾವ ಮತದಲ್ಲಾದರೂ ಸರಿಯಾದ ಬೋಧನೆಯನ್ನೇ ಹೇಳಿದ್ದಾನೆ. ಖಂಡಿಸುವಂತಹಾ ಜ್ಞಾನವನ್ನಾಗಲಿ, ಅಶಾಸ್ತ್ರೀಯತೆ ಇರುವ ಜ್ಞಾನವನ್ನಾಗಲಿ ಎಲ್ಲೂ ಹೇಳಲಿಲ್ಲ. ದೇವರು ಹೇಳದೇ ಇರುವುದು ಯಾವುದಾದರೂ ಇದ್ದರೆ ನಾವೇ ಅದನ್ನು ತೆಗೆದುಹಾಕಿ ಯಾರೂ ಪಕ್ಕದಾರಿ (ಮಾಯೆದಾರಿ)ಗೆ ಹೋಗದೆ ದೇವರ ಮಾರ್ಗವನ್ನೇ ಅವಲಂಬಿಸುವಹಾಗೆ ಮಾಡುತ್ತಿದ್ದೇವೆ. ದೇವರ ಮಾರ್ಗವನ್ನು ತಿಳಿಸುವ ಪ್ರಯತ್ನದಲ್ಲಿ ಮಾಯೆಗೆ ಸಂಬಂಧಿಸಿದ ಮಾತುಗಳನ್ನು, ಇತ್ತ ಬೈಬಲ್‌ನಲ್ಲಾಗಲಿ, ಅತ್ತ ಭಗವದ್ಗೀತೆ ಯಲ್ಲಾಗಲಿ ಖಂಡಿಸಿ ಹೇಳಬೇಕಾಗಿ ಬಂದಿದೆಯೆಂದು ನಿಜವಾದ ಜಿಜ್ಞಾಸಿಗಳು ಅರ್ಥ ಮಾಡಿಕೊಳ್ಳುತ್ತಾರೆಂದು ಕೊಳ್ಳುತ್ತೇನೆ.

ಇಂತಿ

**ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ**

## ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅವಶ್ಯವೋ, ಹಾಗೇ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರ ಅಷ್ಟೇ ಅವಶ್ಯವಾಗುತ್ತದೆ.**

**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲವೆಂದರೂ ಅದು ಅಸತ್ಯವಲ್ಲ.**

# ಆಧ್ಯಾತ್ಮಿಕ ಉತ್ತರ ಬೇಕು

1) ನಿನ್ನ ಹೆಸರು ನಿನಗೆ ತಿಳಿದಿದೆಯಾ? ಉ॥ ನನ್ನ ಹೆಸರು ಜೀವಾತ್ಮ.

2) ನೀನು ಯಾವ ಊರಿಂದ ಬಂದಿದ್ದೀಯೊ ತಿಳಿದಿದೆಯಾ? ಉ॥ ದೇವರಿಂದ.

3) ನೀನು ಹೆಣ್ಣಾ, ಗಂಡಾ, ನಪುಂಸಕನಾ ತಿಳಿದಿದೆಯಾ? ಉ॥ ನಪುಂಸಕ.

4) ನೀನು ಯಾರ ಅಧೀನದಲ್ಲಿ ಇದ್ದೀಯೊ ತಿಳಿದಿದೆಯಾ? ಉ॥ ಪ್ರಕೃತಿ.

5) ನಿನಗೆ ತಂದೆ ಯಾರೋ ತಿಳಿದಿದೆಯಾ? ಉ॥ ಪರಮಾತ್ಮ.

6) ನಿನಗೆ ತಾಯಿ ಯಾರೋ ತಿಳಿದಿದೆಯಾ? ಉ॥ ಪ್ರಕೃತಿ.

7) ನೀನು ಕುರುಡನಾ, ಕಣ್ಣಿರುವವನಾ ತಿಳಿದಿದೆಯಾ? ಉ॥ ಕುರುಡನು.

8) ನಿನಗೆ ಆಹಾರವೇನೋ ತಿಳಿದಿದೆಯಾ? ಉ॥ ಜ್ಞಾನ.

9) ನಿನ್ನ ಉದ್ಯೋಗ ಯಾವುದೋ ತಿಳಿದಿದೆಯಾ? ಉ॥ ಕರ್ಮಯೋಗ.

10) ನಿನ್ನ ಆಕಾರ ನಿನಗೆ ತಿಳಿದಿದೆಯಾ? ಉ॥ ತಿಳಿದಿಲ್ಲ. ದುಂಡಾದ ಆಕಾರ.

11) ನಿನಗೆ ಬಲವಿದೆಯೋ ಇಲ್ಲವೋ ತಿಳಿದಿದೆಯಾ? ಉ॥ ಇಲ್ಲ. ಬಲ ಆತ್ಮದ್ದು.

12) ನಿನಗೆ ಆರೋಗ್ಯವಿದೆಯಾ ಇಲ್ಲಾ ತಿಳಿದಿದೆಯಾ? ಉ॥ ಇಲ್ಲ. ರೋಗವಿದೆ.

13) ನಿನಗೆ ಬುದ್ಧಿ ಇದೆಯೋ ಇಲ್ಲವೋ ತಿಳಿದಿದೆಯಾ? ಉ॥ ಇಲ್ಲ. ಬುದ್ಧಿ ಆತ್ಮದ್ದು.

14) ನೀನು ಎಲ್ಲಿದ್ದೀಯೋ ತಿಳಿದಿದೆಯಾ? ಉ॥ ಜನ್ಮ ಎನ್ನುವ ಜೈಲಿನಲ್ಲಿ.

15) ನೀನು ಎಲ್ಲಿಗೆ ಹೋಗಬೇಕೋ ತಿಳಿದಿದೆಯಾ? ಉ॥ ದೇವರ ಹತ್ತಿರಕ್ಕೆ.

16) ನಿನಗೆ ಮದುವೆ ಆಗಿದೆಯಾ? ಉ॥ ಆಗಿಲ್ಲ. ಯಾವಾಗ ಮುಕ್ತಿ ಸಿಗುತ್ತದೊ ಆಗ ಮದುವೆ ಆಗುತ್ತದೆ.



**"If you only knew the magnificence of the 3, 6, and 9, then you would have a key to the universe."**

"3, 6 ಮತ್ತು 9 ವೊಂದರ ವಿಶೇಷತೆಯನ್ನು ತಿಳಿದುಕೊಂಡರೆ ವಿಶ್ವವನ್ನು ಕುರಿತು ತಿಳಿದುಕೊಳ್ಳುವ ಅವಕಾಶ ಇದೆ."

(1) –ನಿಕೋಲಾ ಟೆಸ್ಲಾ




(2) –ಐನ್‌ಸ್ಟೀನ್




**(3)**

ನಾವು ಇಲ್ಲಿಯವರೆಗು 3 6 9 ಎನ್ನುವ ಅಂಕೆಗಳನ್ನು ಆಧ್ಯಾತ್ಮಿಕ ಭಾವದಿಂದ ಕೂಡಿಕೊಂಡ ಅರ್ಥವನ್ನು ತಿಳಿಸುತ್ತಾ ಬಂದಿದ್ದೇವೆ. ಈ ಚಿಕ್ಕ ಗ್ರಂಥವನ್ನು ಆರು (6) ವರ್ಷಗಗಳ ಕೆಳಗೇ ಬರೆದಿಟ್ಟಿದ್ದೇವೆ. ಆದರೆ 3 6 9 ನ್ನು ಕುರಿತು ಉಳಿದ ಶಾಸ್ತ್ರಜ್ಞರು ಸಹ ಅವರ ಭಾವನೆಯನ್ನು ಪ್ರಕಟಿಸಿರುವುದನ್ನು ಎರಡು ದಿನಗಳ ಕೆಳಗೇ ನೋಡಿದ್ದೇನೆ. ಗಣಿತ ಶಾಸ್ತ್ರದಲ್ಲಿ ಎಷ್ಟೋ ವಿಜ್ಞಾನವನ್ನು ಸಂಪಾದಿಸಿಕೊಂಡ ಶಾಸ್ತ್ರಜ್ಞರು, ಪರಿಶೋಧಕರು 3, 6, 9 ನ್ನು ಕುರಿತು ಬರೆದಿರುವ ಚಿತ್ರ ಪಟಗಳನ್ನು ಈಗ ನಿಮಗೆ ತೋರಿಸುವುದಕ್ಕೆ ಪ್ರಚುರಿಸಿದ್ದೇವೆ. ಅವು ಎಲ್ಲವೂ ನಾವು ಹೇಳಿರುವುದಕ್ಕೆ ಬಲವನ್ನು ಕೈಗೂಡಿಸುವಹಾಗೆ ಇರುವುದರಿಂದ, ಅವರು ಹೇಳಿದ ವಿಷಯಗಳನ್ನು ಪ್ರಕಟಿಸುವುದು ನಡೆದಿದೆ. ಇಲ್ಲಿ ಮೊದಲಿದ್ದ ಶಾಸ್ತ್ರಜ್ಞನ ಹೆಸರು ನಿಕೋಲಾ ಟೆಸ್ಲಾ (Nikola Tesla) ಈತನು ಕರೆಂಟನ್ನು ಕಂಡುಹಿಡಿದ ವ್ಯಕ್ತಿ. ಆತನ "3, 6, 9 ವೊಂದರ ವಿಶೇಷತೆಯನ್ನು ತಿಳಿದುಕೊಂಡರೆ ವಿಶ್ವವನ್ನು ಕುರಿತು ತಿಳಿದುಕೊಳ್ಳುವ ಅವಕಾಶವಿದೆ." ಎಂದು ಬರೆದಿರುವುದು ಖಗೋಳಶಾಸ್ತ್ರಕ್ಕೆ ಸಂಬಂಧಿಸಿದ ವಿಷಯವಾದರೂ, ಅದು ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಬಹಳ ಹತ್ತಿರ ಸಂಬಂಧವಿದೆ. ಹಾಗೇ ಪ್ರಪಂಚದಲ್ಲಿ ದೊಡ್ಡ ಸೈಂಟಿಸ್ಟ್ ಎಂದು ಹೆಸರುವಾಸಿಯಾದ ಐನ್‌ಸ್ಟೀನ್

(Einstein) ಗಣಿತ ಶಾಸ್ತ್ರದ ಪ್ರಕಾರ 6–3=6 ಎಂದು ಬರೆದ ಅಂಕೆಗಳನ್ನು ನೋಡುತ್ತಲೆ ಆಧ್ಯಾತ್ಮಿಕ ನೆನಪಿಗೆ ಬರುತ್ತಿದೆ. ಇಬ್ಬರು ಶಾಸ್ತ್ರಜ್ಞರು ಅವರ ಭಾವನೆಗಳಲ್ಲಿ ಯಾವ ಅರ್ಥದಿಂದ ಹೇಳಿದರೂ, ನಮ್ಮ ಭಾವನೆಯಲ್ಲಿ ದೇವರು ವಿಶ್ವದಲ್ಲಿ 3, 6, 9ಗಿ ಇದ್ದಾನೆಂದು, 3, 6, 9ನ್ನು ಜೀವಾತ್ಮ, ಆತ್ಮ, ಪರಮಾತ್ಮವಾಗಿ ಹೇಳುತ್ತಿದ್ದೇವೆಂದು ಈ ಗ್ರಂಥದಲ್ಲಿ ಮೊದಲೇ ಹೇಳಿಕೊಂಡಿದ್ದೇವೆ. ಅದೇ ಪ್ರಕಾರ ಈಗ ಈ ಚಿತ್ರ ಪಟಕ್ಕೆ ವಿವರವನ್ನು ಹೇಳಿಕೊಳ್ಳೋಣ.

ಮೊದಲ ಚಿತ್ರದಲ್ಲಿನ ಶಾಸ್ತ್ರಜ್ಞನನ್ನು ಗಮನಿಸಿದರೆ ಒಂದು ಕೈಯಿಂದ ಬೆಳಗುತ್ತಿರುವ ಲೈಟನ್ನು ತೋರಿಸುತ್ತಾ ಮತ್ತೊಂದು ಕೈಯಿಂದ ಒಂದು ಬೆರಳನ್ನು ತಲೆಯಲ್ಲಿನ ಮೆದುಳಿನ ಕಡೆಗೂ, ಮತ್ತೊಂದು ಬೆರಳನ್ನು ಬಾಯಿಕಡೆಗೂ, ಮೂರನೆ ಬೆರಳನ್ನು ಶರೀರದ ಕಡೆ ತೋರಿಸುತ್ತಿದ್ದಾನೆ. ಆ ದಿನ ಆ ವ್ಯಕ್ತಿಯಲ್ಲಿ ಆರಾಗಿರುವ ಎರಡನೆಯ ಆತ್ಮ ಯಾವ ಭಾವವನ್ನು ತಿಳಿಸಿದೆಯೋ ನನಗೆ ತಿಳಿಯದು ಆದರೆ, ಈಗ ನಮಗೆ ಅವಶ್ಯಕವಾದ ಆಧ್ಯಾತ್ಮಿಕ ಭಾವನೆಯನ್ನೇ ನನ್ನಲ್ಲಿ ಆರಾಗಿರುವ ಎರಡನೆಯ ಆತ್ಮ ತಿಳಿಸಿದ ವಿಷಯವನ್ನೇ ತಿಳಿಸುತ್ತಿದ್ದೇನೆ. ಜೀವವಿರುವ ಶರೀರವನ್ನು ಬೆಳಗುತ್ತಿರುವ ಬಲ್ಬಿನೊಂದಿಗೆ ಸಮಾನವಾಗಿ ಹೋಲಿಸಿ ಒಂದು ಕೈಯಿಂದ ತೋರಿಸುತ್ತಿದ್ದಾನೆ. ಬೆಳಗದ ಬಲ್ಬು ಜೀವವಿಲ್ಲದ ಶರೀರವಂತಹದು. ಒಂದು ಬಲ್ಬು ಬೆಳಗಬೇಕೆಂದರೆ ಅದಕ್ಕೆ ಪಾಜಿಟಿವ್, ನೆಗಿಟಿವ್, ಎರ್ತ್ ಎನ್ನುವ ಮೂರು ಜೋಡಣೆಗಳಿರುತ್ತವೆ. ಹಾಗೇ ಒಂದು ಶರೀರ ಸಜೀವವಾಗಬೇಕೆಂದರೆ ಅದರೊಳಗೆ ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮೂರು ಆತ್ಮಗಳಿರಬೇಕು. ಮುಖ್ಯವಾಗಿ ಬಲ್ಬು ಬೆಳಗುವುದಕ್ಕೆ ಪಾಜಿಟಿವ್, ನೆಗಿಟಿವ್ (ಧನಧೃವ, ಋಣಧೃವ) ಎನ್ನುವ ಎರಡು ಜೋಡಣೆಗಳಿದ್ದರೂ ಮೂರನೆ ಜೋಡಣೆ ಎರ್ತ್ (ಭೂಮಿ) ಎನ್ನುವ ಜೋಡಣೆ ತಪ್ಪದೆ ಅನುಸಂಧಾನವಾಗಿರುತ್ತದೆ. ಇದನ್ನು ಕುರಿತು ತಿಳಿಯುವುದಕ್ಕೆ ಒಂದು ಪ್ಲಗ್ ಸಾಕೆಟ್‌ನ್ನು ನೋಡಿದರೆ ಚೆನ್ನಾಗಿ ಅರ್ಥವಾಗುತ್ತದೆ.




ಒಂದು ಬೆಳುಗುತ್ತಿರುವ ಬಲ್ಬನ್ನು ತೋರಿಸಿದ ನಿಕೋಲಾ ಟೆಸ್ಲಾ ಸಜೀವವಾಗಿರುವ ಶರೀರದಲ್ಲಿ ಮೂರು ಆತ್ಮಗಳಿವೆಯೆಂದು ತಿಳಿಸುತ್ತಿದ್ದಾನೆ. ಅಷ್ಟೇ ಅಲ್ಲದೆ ಮೂರು ಬೆರಳುಗಳನ್ನು ತೋರಿಸುತ್ತಾ ಒಂದನ್ನು ಮೇಲಕ್ಕೆ ಮೆದುಳಿನ ಕಡೆಗೆ, ಎರಡನೆಯದನ್ನು ಬಾಯಿಕಡೆಗೆ, ಮೂರನೆಯದನ್ನು ಶರೀರದ ಕಡೆಗೆ ತೋರಿಸುತ್ತಿದ್ದಾನೆ. ಯಾರಿಗೂ ತಿಳಿಯದಂತೆ ಆಜ್ಞೆಯನ್ನು ಕೊಡುವ ಮೆದುಳನ್ನು ಪರಮಾತ್ಮ ಗುರುತಾಗಿ, ಕದಲಿ ಕೆಲಸ ಮಾಡುತ್ತಾ ಮಾತನಾಡುವ ಬಾಯನ್ನು ಆತ್ಮವಾಗಿ, ಸ್ವಲ್ಪ ಕಾಲ ಬೆಳೆದು ಎಂದಾದರೂ ನಶಿಸುವ ಶರೀರವನ್ನು ಜೀವಾತ್ಮ ಗುರುತಾಗಿ ಸೂಚಿಸುತ್ತಾ ಆ ವಿಧವಾಗಿ ಒಂದು ಬೆರಳನ್ನು ಮೇಲಕ್ಕೆ, ಎರಡನೆಯ ಬೆರಳನ್ನು ಮದ್ಯಕ್ಕೆ, ಮೂರನೆ ಬೆರಳನ್ನು ಕೆಳಗಿನ ಕಡೆಗೆ ತೋರಿಸುವುದು ನಡೆದಿದೆ. ಇದನ್ನನುಸರಿಸಿ ಬೆಳುಗುತ್ತಿರುವ ಬಲ್ಬಿ(ದೀಪ)ನಂತಹದು ಸಜೀವವಾಗಿರುವ ಶರೀರವೆಂದು ತೋರಿಸುವ ಹಾಗೆ ಇದೆ. ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮೂರು ಆತ್ಮಗಳ ವಿಷಯ ತಿಳಿದುಕೊಂಡರೆ ಜೀವದಿಂದ ಕೂಡಿಕೊಂಡ ಪ್ರಪಂಚ ಎಂದರೆ ವಿಶ್ವ ವೊಂದರ ವಿವರ ತಿಳಿಯುತ್ತದೆಂದು 3, 6, 9 ಎಂದು ತೋರಿಸಿ ಇವುಗಳನ್ನು ಕುರಿತು ತಿಳಿದುಕೊಂಡರೆ ಪ್ರಕೃತಿ ಪರಮಾತ್ಮದೊಂದಿಗೆ ಕೂಡಿಕೊಂಡ ವಿಶ್ವವನ್ನು (ಪ್ರಕೃತಿ+ಆತ್ಮಗಳು=ವಿಶ್ವ) ತಿಳಿಯಬಹುದೆಂದು ನಿಕೋಲಾ ಟೆಸ್ಲಾ ತಿಳಿಸಿದ್ದಾನೆ.

ಇನ್ನು ಐನ್‌ಸ್ಟೀನ್ ತಿಳಿಸಿದ ವಿಷಯಕ್ಕೆ ಬಂದರೆ ಆತನು 6–3=6 ಎಂದು ಬರೆದಿದ್ದಾನೆ. ಹಾಗೆ ಬರೆಯುವುದೇ ಅಲ್ಲದೆ, ಒಂದು ಕಡೆ ಕೈಯಿಂದ 6–3 ನ್ನು ಅಂಡರ್ ಲೈನ್ ಮಾಡಿ (6–3 ಕ್ಕೆ ಕೆಳಗೆ ಗೆರೆ ಗೀಚಿ) ತೋರಿಸುತ್ತಾ, ಮತ್ತೊಂದು ಪಕ್ಕದಲ್ಲಿ ಬಾಯಿಂದ ನಾಲಿಗೆಯನ್ನು ಪೂರ್ತಿ ಹೊರಗೆ ಇಟ್ಟು ತೋರಿಸುತ್ತಿದ್ದಾನೆ. ಈ ದೃಶ್ಯವೆಲ್ಲವೂ ಒಂದು ವಿಚಿತ್ರವಾಗಿ ಕಾಣಿಸಿದರೂ,

ಆತ್ಮ ವಿಷಯದಲ್ಲಿ (ಆಧ್ಯಾತ್ಮಿಕ ವಿಷಯದಲ್ಲಿ) ಎಷ್ಟೋ ಜ್ಞಾನದಿಂದ ಕೂಡಿಕೊಂಡ ಅರ್ಥ ಇದೆಯೆಂದು ಆತ್ಮವೇ ತಿಳಿಸುತ್ತಿದೆ ನೋಡಿರಿ. ನಾವು ಗ್ರಂಥದಲ್ಲಿ ಬರೆದುಕೊಂಡ ಅರ್ಥದ ಪ್ರಕಾರ ಆರು (6) ಆತ್ಮಕ್ಕೆ ಗುರುತೆಂದು, ಮೂರು (3) ಜೀವಾತ್ಮನಿಗೆ ಗುರುತೆಂದು ಹೇಳಿಕೊಂಡಿದ್ದೇವೆ. ಸಜೀವ ಶರೀರದಲ್ಲಿ ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮೂರು ಆತ್ಮಗಳಿದ್ದರೂ ಪರಮಾತ್ಮ ರೂಪ, ನಾಮ, ಕ್ರಿಯೆಗಳು ಇಲ್ಲದ್ದಾಗಿ ಶರೀರದಲ್ಲಿದ್ದರೂ ಅದು ಇಲ್ಲದಹಾಗೇ, ಎಲ್ಲೂ ಲೆಕ್ಕಿಸಲಾಗುವುದಿಲ್ಲ. ಶರೀರದಲ್ಲಿ ತಿಳಿಯುವವು ಆತ್ಮ, ಜೀವಾತ್ಮ ಎನ್ನುವ ಎರಡೇ ಆದ್ದರಿಂದ, ಐನ್‌ಸ್ಟೀನ್ ಆರನ್ನು, ಮೂರನ್ನು ಮಾತ್ರವೇ ತೋರಿಸಿದ್ದಾನೆ. ಶರೀರದಲ್ಲಿ ಆತ್ಮಕ್ಕು ಜೀವಾತ್ಮಕ್ಕು ಎರಡಕ್ಕೂ ಗುರುತಾಗಿ ನಾಲಿಗೆ ಇದೆ. ಒಂದು ಕೆಲಸವನ್ನು ಮಾಡಿದಾಗ, ಆ ಕೆಲಸವನ್ನು ಜೀವಿಯಾದ ನಾನು ಮಾಡಿದಹಾಗೆ ನಿಮಗೆ ಕಾಣಿಸಿದರೂ, ಅದನ್ನು ನಾನು ಮಾಡಲಿಲ್ಲ, ನನ್ನಲ್ಲಿರುವ ಆತ್ಮ ಮಾಡಿದೆಯೆಂದು ತಿಳಿಸುವ ಸಲುವಾಗಿ, ಪೂರ್ವದಲ್ಲಿ ಒಂದು ಕಾರ್ಯವನ್ನು ಮಾಡಿದ ವ್ಯಕ್ತಿ ಅದು ತನಗೆ ಸಂಬಂಧವಿಲ್ಲವೆಂದು ಅರ್ಥವಾಗುವಹಾಗೆ ನಾಲಿಗೆಯನ್ನು ಹೊರಗಿಟ್ಟು ತೋರಿಸುತ್ತಿದ್ದರು. ಪ್ರಸ್ತುತ ಕಾಲದಲ್ಲಿ ಕರ್ಮಯೋಗ ಸಾರಾಂಶವನ್ನು ತಿಳಿಸುವ ನಾಲಿಗೆಯನ್ನು ಹೊರಗೆ ತೋರಿಸುವ ವಿಧಾನ ಯಾರಿಗೂ ತಿಳಿಯದಂತೆ ಹೋಗಿದೆ. ಆದರೂ ನನ್ನ ಮಾತಿಗೆ ಸಾಕ್ಷಿ ಇಂದಿಗೂ ಕೆಲವು ಕಡೆ ಇದೆಯೆಂದು, ಅದರ ಪ್ರಕಾರವೇ ಅಮೆರಿಕಾ ರೆಜ್ಲಿಂಗ್ ಕಿಂಗ್ ಆದ ಅಂಡರ್‌ಟೇಕರ್ ತಾನು ಮ್ಯಾಚ್ ಗೆದ್ದಾಗಲೆಲ್ಲಾ ಗೆದ್ದಿರುವುದು ನಾನಲ್ಲ, ಆತ್ಮಶಕ್ತಿಯಿಂದಲೇ ಗೆಲ್ಲುವುದು ನಡೆದಿದೆಯೆಂದು ತಿಳಿಯುವಹಾಗೆ, ಮ್ಯಾಚ್ ಮುಗಿದನಂತರ ಮೊಣಕಾಲಿನ ಮೇಲೆ ಕುಳಿತುಕೊಂಡು ತನ್ನ ನಾಲಿಗೆಯನ್ನು ಪೂರ್ತಿ ಹೊರಗೆ ಇಟ್ಟು ತೋರಿಸುವುದು ನಡೆಯುತ್ತಿದೆ. ನಿಮಗೆ ಅರ್ಥವಾಗಬೇಕೆಂದರೆ ಇಂಟರ್‌ನೆಟ್‌ನಲ್ಲಿ ಅಂಡರ್‌ಟೇಕರ್ ಗೆದ್ದ ಮ್ಯಾಚ್‌ಗಳನ್ನು ನೋಡಬಹುದು. ನಾಲಿಗೆ ಮನುಷ್ಯ ಅಲುಗಾಡಿಸಿದರೆ ಅಲುಗಾಡುತ್ತಿದೆ. ಹಾಗೇ ಮನುಷ್ಯ ಕದಲಿಸದಿದ್ದರೂ ಕದುಲುತ್ತಿದೆ. ಮನುಷ್ಯ ಅಂದುಕೊಂಡಾಗ ಅಲುಗಾಡಿಸಿದರೆ ಅಲುಗಾಡುವ ನಾಲಿಗೆ, ಯಾವ ಕಡೆ ಕದಲಿಸಿದರೆ ಆಕಡೆ ಕದಲುವ ನಾಲಿಗೆ, ಉಳಿದ ಸಮಯಗಳಲ್ಲಿ ಮನುಷ್ಯನಿಗೆ ತಿಳಿಯದಂತೆ, ಮನುಷ್ಯ

ಪ್ರಮೇಯವಿಲ್ಲದೆ ಅದಷ್ಟಕ್ಕದೇ ಕದಲುತ್ತಿರುವಹಾಗೆ ಕಾಣಿಸುತ್ತಿದೆ. ಹಾಗೆ ಮನುಷ್ಯ ಪ್ರಮೇಯವಿಲ್ಲದಂತೆ ಕದಲುವುದಕ್ಕೆ ಕಾರಣ ನಮಗೆ ತಿಳಿಯದಂತೆ ಶರೀರದಲ್ಲಿರುವ ಆತ್ಮವೇ ಎಂದು ತಿಳಿಯುತ್ತಿದೆ. ಆತ್ಮ ತನ್ನ ಶಕ್ತಿಯಿಂದ ನಾಲಿಗೆಯನ್ನು ಹಲ್ಲಿನ ಮಧ್ಯದಲ್ಲಿ ವೇಗವಾಗಿ ಕದಲಿಸುತ್ತಾ ತನ್ನ ಶಕ್ತಿಗೆ ಸಾಕ್ಷಿ ಕೊಡುತ್ತಿದೆ. ಆದ್ದರಿಂದ ಮನುಷ್ಯ ಪ್ರಮೇಯದಿಂದ ಕದಲುವ ನಾಲಿಗೆ ಜೀವಾತ್ಮಕ್ಕೆ ಗುರುತೆಂದು, ಮನುಷ್ಯ ಪ್ರಮೇಯವಿಲ್ಲದೆ, ಜೀವಾತ್ಮನಿಗೆ ತಿಳಿಯದಂತೆ ಕದಲುವ ನಾಲಿಗೆ ಆತ್ಮಕ್ಕೆ ಗುರುತೆಂದು ತಿಳಿಯಬಹುದು. ಇತ್ತ ಜೀವಾತ್ಮನಿಗೂ ಅತ್ತ ಆತ್ಮಕ್ಕೂ ಎರಡಕ್ಕೂ ಗುರುತಾದ ನಾಲಿಗೆಯನ್ನು ಐನ್‌ಸ್ಟೀನ್ ತೋರಿಸುತ್ತಾ, ಜೀವಾತ್ಮಕ್ಕೆ, ಆತ್ಮಕ್ಕೆ ಗುರುತಾದ ಮೂರು ಆರನ್ನೇ ಅಂಡರ್‌ಲೈನ್ ಮಾಡಿ ತೋರಿಸಿದ್ದಾನೆ. ಮನುಷ್ಯನ ಶರೀರದಲ್ಲಿ ಜೀವಾತ್ಮನಿಗೆ ತಿಳಿದು ಕೆಲಸ ನಡೆದಾಗ ಉಪಯೋಗಪಡುವ ಶಕ್ತಿ ಆತ್ಮ ಶಕ್ತಿಯೇಯೆಂದು, ಜೀವಾತ್ಮನಿಗೆ ತಿಳಿಯದಂತೆ ನಡೆಯುವಾಗಲೂ ಸಹ ಉಪಯೋಗಪಡುವ ಶಕ್ತಿ ಆತ್ಮಶಕ್ತಿಯೇ ಎಂದು, ಎಲ್ಲರಿಗೂ ತಿಳಿಯುವಹಾಗೆ ಆತ್ಮ ಗುರುತಾದ ಆರಲ್ಲಿ ಮೂರನ್ನು ತೆಗೆದುಹಾಕಿದರೂ, ಆರೇ ಇದೆಯೆಂದು 6–3=6 ಎಂದು ತೋರಿಸುವುದು ನಡೆದಿದೆ.

ಇನ್ನು ಮೂರನೆ ಚಿತ್ರದಲ್ಲಿ ಬಿಳಿಯದರಲ್ಲಿ ಕಪ್ಪು ಗುರುತಾಗಿ ಮೂರನ್ನು, ಕಪ್ಪುದರಲ್ಲಿ ಬಿಳಿ ಗುರುತಾಗಿ ಆರನ್ನು ತೋರಿಸುವುದು ನಡೆದಿದೆ. ಶರೀರದಲ್ಲಿ ಜೀವಾತ್ಮ (3), ಆತ್ಮ (6) ಎರಡೂ ಬೇರೆ ಬೇರೆಯಾಗಿದ್ದರೂ ಎರಡರಲ್ಲಿ ಪರಮಾತ್ಮ ಸೇರಿ ಅಣುಅಣುವಲ್ಲಿ ಶರೀರವೆಲ್ಲಾ ವ್ಯಾಪಿಸಿದೆಯೆಂದು ತಿಳಿಯುವಹಾಗೆ, ಬಿಳಿ ಕಪ್ಪು ಎರಡು ಬಣ್ಣಗಳು ಸೇರಿದ ಬಿಳಿ, ಕಪ್ಪು ಬಣ್ಣದ ಗೆರೆಯನ್ನು ಮೂರಕ್ಕು ಅರಕ್ಕು ಮಧ್ಯದಲ್ಲಿಯೂ, ಮೂರಕ್ಕೂ ಆರಕ್ಕೂ ಸುತ್ತಲೂ ಇರುವಹಾಗೆ ತೋರಿಸುವುದು ನಡೆದಿದೆ. ಹಾಗೆ ತೋರಿಸುವುದೇ ಅಲ್ಲ ಗೆರೆಯಂತಿರುವ ಕಪ್ಪು ಬಿಳಿ ಬೆರೆತಿರುವ ತಿಳೀಬಣ್ಣದ ಗೆರೆಯನ್ನು ಒಂಬತ್ತು (9) ಆಗಿ ಗುರುತಿಸಿ ತೋರಿಸುವುದು ನಡೆದಿದೆ. ಆ ದಿನ ಅವರು ಯಾವ ಭಾವದಿಂದ ತೋರಿಸಿದರೂ, ಈ ದಿನ ಆತ್ಮ ತನ್ನ ಜ್ಞಾನ ತಿಳಿಯುವಹಾಗೆ ಆ ಗೊಂಬೆಗಳಿಗೆ ಪೂರ್ತಿ ವಿವರವನ್ನು ಕೊಟ್ಟಿದೆ.


9
8
1
7
0
2
6
5
4
3


9
8
1
7
2
6
3
5
4


11.25°
11.25°
(1+1+2+5=9)


5.625°
5.625°
(5+6+2+5=18)
(1+8=9)




$60^{\circ} \times 3 = 180^{\circ}$

(1+8+0=9)




$90^{\circ} \times 4 = 360^{\circ}$

(3+6+0=9)


108°
108°
108°
108°
108°
108°
X 5
540°
(5+4+0=9)


120°
120°
120°
120°
120°
120°
120°
X 6
720°
(7+2+0=9)




$$\begin{array}{r} 135^{\circ} \\ \times \quad 8 \\ \hline 1080^{\circ} \end{array}$$

(1+0+8+0=9)




$$\begin{array}{r} 140^{\circ} \\ \times \quad 9 \\ \hline 1260^{\circ} \end{array}$$

(1+2+6+0=9)




$$144^{\circ} \times 10 = 1440^{\circ}$$

(1+4+4+0=9)

**Paradoxically,**
**Nine plus any digit**
**returns the same digit.**
**i.e. 9+5=14 (1+4=5)**

**The sum of all digits**
**excluding nine is 36.**
**1+2+3+4+5+6+7+8=36**
**(3+6=9)**


1 2 3 6 3 3 4 5 9 9 6 6 7 8 6 3 9 9
4 8 3 6 12 3 16 20 9 9 24 6 28 32 6 3 36 9
7 14 3 6 21 3 28 35 9 9 42 6 49 56 6 3 63 9
8 16 6 3 24 6 32 40 9 9 48 3 56 64 3 6 72 9
5 10 6 3 15 6 20 25 9 9 30 3 35 40 3 6 45 9
2 4 6 3 6 6 8 10 9 9 12 3 14 16 3 6 18 9


3
6
9

ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.

ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.

ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ" ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ

—ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

**Cell:09705864675, 09440556968, 09611133635**

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ

KHUDA ISLAMIC SPIRITUAL SOCIETY

K.I.S.S

(Regd.No.459/20111)

**ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ (K.I.S.S)**

**(Regd.No.: 459/2011)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@khudaislamicspiritualsociety.org

***www. khudaislamicspiritualsociety.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಪ್ರಬೋಧ ಸೇವಾ ಸಮಿತಿ

ಪ್ರಬೋಧ ಸೇವಾ ಸಮಿತಿ

ಬ್ರಹ್ಮ ಚಕ್ರ

ಕಾಲ ಚಕ್ರ

ಕರ್ಮ ಚಕ್ರ

ಗುಣ ಚಕ್ರ

ಬ್ರಹ್ಮ ನಾಡಿ

ತ್ರೈತ ಸಿದ್ಧಾಂತ

## ಪ್ರಬೋಧ ಸೇವಾ ಸಮಿತಿ (P.S.S.)

(Regd.No.: 304/1991)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

***www. thraithashakam.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ

ದ್ರಾವಿಡ ಶ್ರೇಷ್ಠಿ ಸಂಘ

ಮಧ್ಯಾತ್ಮ
ವಾರ್ತಕನು

ಜೀವಿಯು
ಶ್ರೇಷ್ಠಿ

ದೇವರು
ಗುಪ್ತ

**ದ್ರಾವಿಡ ಶ್ರೇಷ್ಠಿ ಸಂಘ (D.S.S)**

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),
ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ-509381
e-mail id : info@dravidashreshtisangham.org

***www.dravidashreshtisangham.org***

# ದೇವರ ಗುರುತು–963

ಭಗವದ್ಗೀತ ಅ.15-ಶ್ಲೋ॥16,17

# ಮಾಯೆ ಗುರುತು–666

ಭಗವದ್ಗೀತ ಅ.16-ಶ್ಲೋ॥14

ಪ್ರಮುಖರ ಲೇಖನ

ಸಾಕ್ಷಿ ತೆಲುಗು ನ್ಯೂಸ್ ಪೇಪರ್, 21-01-2014



## ಇಂದೂ ದೇಶವೇ ಇಂಡಿಯಾ!

ಹಿಮಾಲಯಗಳಿಗು, ವಿಂಧ್ಯಪರ್ವತಗಳಿಗು ಮಧ್ಯದಲ್ಲಿ ಅಂದಿನ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೊ ನಮ್ಮ ದೇಶ ಭೂಪಟದಲ್ಲಿ ನೀನು ನೋಡಿದ್ದೀಯಾ. ಅದು ಬಾಲ ಚಂದ್ರಾಕಾರವಾಗಿ ಇದ್ದಹಾಗೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿದೆ.

ರಾಮಾಯಣ ಹುಟ್ಟಿದ ಬಹಳ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯೆ ಏರ್ಪಟ್ಟ ಕುಟುಂಬ ಕಲಹವೇ ಭಾರತ ಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಇಷ್ಟೊ ಅಷ್ಟೊ ಅಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವುಗಳೆಲ್ಲವುಕ್ಕಿಂತ ದೊಡ್ಡದಾದ ಭಗವದ್ಗೀತೆ ಅನ್ನುವ ಮಹಾ ಗ್ರಂಥ ಮಹಾಭಾರತದಲ್ಲಿರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮವಾದುದಾಗಿದೆ. ಸಾವಿರ ಸಂವತ್ಸರಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ದೊಡ್ಡ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದ ಮಕ್ಕಳು, ಪ್ರಯೋಜನ ಹೊಂದದ ಹಿರಿಯರಂತೂ ಇರುವುದಿಲ್ಲ.

•ನೆಹ್ರೂ ಇಂದಿರಾಗೆ ಬರೆದ ಲೇಖನದಿಂದ

ಎಲ್ಲ ಮತಗಳಿಗೂ ಸಂಬಂಧಪಟ್ಟಿರುವುದು